

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ

# "ಕೆ.ಪಿ.ಪೂರ್ಣಚಂದ್ರತೇಜಸ್ವಿ ಕಥೆಗಳಲ್ಲಿ ಹಾಸ್ಯಪ್ರಜ್ಞೆ"

ಸಂಶೋಧನ ವಿದ್ಯಾರ್ಥಿನಿ

ಸುಜಾತ.ಎ.

ಮಾರ್ಗದರ್ಶಕರು

ಪ್ರೊ. ಡಿ.ಲಿಂಗಯ್ಯ



ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

೨೦೦೮







ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ

# "ಕೆ.ಪಿ.ಪೂರ್ಣಚಂದ್ರತೇಜಸ್ವಿ ಕಥೆಗಳಲ್ಲಿ ಹಾಸ್ಯಪ್ರಜ್ಞೆ"

ಸಂಶೋಧನ ವಿದ್ಯಾರ್ಥಿನಿ
ಸುಜಾತ.ಎ.

ಮಾರ್ಗದರ್ಶಕರು
ಪ್ರೊ. ಡಿ.ಲಿಂಗಯ್ಯ






ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ
ಬೆಂಗಳೂರು

೨೦೦೯

# ಅಭ್ಯರ್ಥಿಯ ಪ್ರಮಾಣಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮–೨೦೦೯ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಕೆ.ಪಿ.ಪೂರ್ಣಚಂದ್ರತೇಜಸ್ವಿ ಕಥೆಗಳಲ್ಲಿ ಹಾಸ್ಯಪ್ರಜ್ಞೆ"** ಎಂಬ ನಿಬಂಧವನ್ನು ಪ್ರೊ.ಡಿ.ಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ/

Sujatha. A

( ಸುಜಾತ.ಎ )

ಸಂಶೋಧನ ವಿದ್ಯಾರ್ಥಿನಿ

ದಿನಾಂಕ : ೩೦–೦೯–೨೦೦೯

ಸ್ಥಳ : ಬೆಂಗಳೂರು

## ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮-೨೦೦೯ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಕೆ.ಪಿ.ಪೂರ್ಣಚಂದ್ರತೇಜಸ್ವಿ ಕಥೆಗಳಲ್ಲಿ ಹಾಸ್ಯಪ್ರಜ್ಞೆ"** ಎಂಬ ನಿಬಂಧವನ್ನು ಸುಜಾತ.ಎ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ನಿಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

( ಪ್ರೊ. ಡಿ. ಲಿಂಗಯ್ಯ )
ಮಾರ್ಗದರ್ಶಕರು

ದಿನಾಂಕ : ೩೦-೦೯-೨೦೦೯
ಸ್ಥಳ : ಬೆಂಗಳೂರು

ಪರಿವಿಡಿ | ಪುಟ ಸಂಖ್ಯೆ

# ಅಧ್ಯಾಯ – ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯ ಚರಿತ್ರೆಯ ಪುಟಗಳನ್ನು ತೆರೆದು ನೋಡಿದಾಗ ಸಾಹಿತ್ಯ ರಚನೆಯಲ್ಲಿ ಅಳವಡಿಸಿಕೊಂಡಿರುವ ವಿಭಿನ್ನ ಶೈಲಿ, ತಂತ್ರದ ಬಗೆಗಳನ್ನು ಕಾಣಬಹುದಾಗಿದೆ. ಅದರಲ್ಲೂ ನವರಸಗಳು ತುಂಬಿ ತುಳುಕುವ ನಮ್ಮ ಕನ್ನಡ ಸಾಹಿತ್ಯದಲ್ಲಿ ಹಾಸ್ಯವು ಒಂದು ಅಭಿವ್ಯಕ್ತಿ ಮಾಧ್ಯಮವಾಗಿರುವುದನ್ನು ಕಾಣಬಹುದು. ಮನುಷ್ಯನ ಆರೋಗ್ಯಕ್ಕೆ ನಗು ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾಗಿ ಸಾಹಿತ್ಯದ ಅಭಿವ್ಯಕ್ತಿಗೆ ಹಾಸ್ಯ ಪ್ರೇರಕವಾಗಿದೆ. ಹಾಸ್ಯ ರಸವನ್ನು ಕನ್ನಡ ಸಾಹಿತ್ಯದ ದಿಗ್ಗಜರು ತಮ್ಮದೇ ಆದ ದೃಷ್ಟಿಕೋನಗಳಿಂದ ತಮ್ಮ ಸಾಹಿತ್ಯ ಕೃತಿಗಳಲ್ಲಿ ಬಳಸಿಕೊಂಡಿದ್ದಾರೆ. ಪ್ರಾಚೀನ ಕವಿಗಳು ಪ್ರತಿಪಾದಿಸಿದ ಹಾಸ್ಯವು ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದ್ದು ನಮ್ಮ ಸಾಹಿತ್ಯ ಪ್ರಕಾರಗಳಾದ ಕಾದಂಬರಿ, ಸಣ್ಣಕತೆ, ನಾಟಕ, ಲಲಿತಪ್ರಬಂಧ ಇತರೆ ಎಲ್ಲಾ ಪ್ರಕಾರಗಳಲ್ಲೂ ಸಮೃದ್ಧವಾಗಿದೆ.

ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಹಾಸ್ಯ ಒಂದು ಹೊಸ ಬೆಳವಣಿಗೆ. ಜಿ.ಪಿ.ರಾಜರತ್ನಂ ಮಾತಿನಲ್ಲಿ ಹೇಳುವುದಾದರೆ "ಹಿಂದೆ ಅಪರೂಪಕ್ಕೆ ನಕ್ಕಿದ್ದ ತಾಯಿ ಈಗ ಧಾರಾಳವಾಗಿ ನಗುತ್ತಿದ್ದಾಳೆ". ಇದೊಂದು ಗಮನಾರ್ಹ ಸಂತಸದ ವಿಷಯ. ನಮ್ಮ ಕನ್ನಡ ಸಾಹಿತ್ಯ ಕವಿಗಳು ಹಾಸ್ಯರಸವನ್ನು ಸ್ಫುರಿಸಲೇಂದು ಕೆಲವರು ಕೃತಿ ರಚನೆ ಮಾಡಿದರೆ ಕೆಲವರು ತಮ್ಮ ಕಥೆಗಳಲ್ಲಿ ಹಾಸ್ಯರಸವನ್ನು ನಿರರ್ಗಳವಾಗಿ ತಮ್ಮ ಕಥನ ಕೌಶಲದ ಮೂಲಕ ಹೊರಹೊಮ್ಮಿಸಿದರು. ಕೆಲವು ಕವಿಗಳು ಹಾಸ್ಯಕವಿಗಳೆಂದು ಪ್ರಸಿದ್ಧರಾದರೆ ಮತ್ತೆ ಕೆಲವರು ಗಾಂಭಿರ್ಯತೆಯಲ್ಲೂ ಹಾಸ್ಯವನ್ನು ತಂದಿರುವುದು ಕಾಣಬಹುದಾಗಿದೆ. ಸಾಹಿತ್ಯ ಕೃತಿಗಳಲ್ಲಿ ಹಾಸ್ಯವನ್ನು ತುಂಬಬೇಕೆನ್ನುವ ಕವಿ ಸ್ವತಃ ಹಾಸ್ಯಕಾರನಾಗಿರಬೇಕಿಲ್ಲ. ಓದುಗನಲ್ಲಿ ಹಾಸ್ಯ ಪ್ರವೃತ್ತಿಯನ್ನು ಸ್ಫುಟಗೊಳಿಸುವ ಕಲೆಯನ್ನು ಬಲ್ಲವನಾಗಿರಬೇಕು ಎಂಬ ನಿಮಯ ಇಂದಿನ ಸಾಹಿತ್ಯ ಕೃತಿಗಳಿಗೆ ಅಷ್ಟು ಸಮಂಜಸವಲ್ಲವೆಂಬುದು ನಾವು ಇಂದಿನ ಸಾಹಿತ್ಯ ಕೃತಿಗಳಲ್ಲಿ ಹಾಸ್ಯ ಹೊಂದಿರುವ ಸ್ಥಾನವನ್ನು ನಾವು ಗಮನಿಸಿದಾಗ ತಿಳಿದು ಬರುತ್ತದೆ. ನಮ್ಮ ಪ್ರಾಚೀನ ಕನ್ನಡ ಸಾಹಿತ್ಯದಿಂದ ಇಂದಿನವರೆಗೂ ವಿಭಿನ್ನ ಲೇಖಕರು ವಿಭಿನ್ನ ಸನ್ನಿವೇಶ ಅದ್ಭುತವಾದ ಶೈಲಿ ಮತ್ತು ತಂತ್ರಗಾರಿಕೆಯೊಂದಿಗೆ ಹಾಸ್ಯದ ನಿರೂಪಣೆ ಕಂಡು ಬಂದಿದೆ. ಅವುಗಳು ಅಂದಿನ ಕಾಲ, ಪರಿಸರ, ಕಥಾವಸ್ತುಗಳಿಗೆ ಸಂಬಂಧಪಟ್ಟಿರುವುದರಿಂದ ತಮ್ಮದೇ ಆದ ಅಸ್ಥಿತ್ವವನ್ನು ಪಡೆದುಕೊಂಡು ಇಂದಿನ ಕವಿಗಳ ಸೃಜನಶೀಲತೆಗೆ ದಾರಿದೀಪವಾಗಿದೆ.

೧೯೬೦ರ ಅನಂತರ ಕಥೆಗಳನ್ನು ಬರೆಯಲು ಪ್ರಾರಂಭಿಸಿದ ಪೂರ್ಣಚಂದ್ರತೇಜಸ್ವಿಯವರು ಕನ್ನಡದ ಅತ್ಯುತ್ತಮ ಕಥೆಗಾರರಲ್ಲಿ ಒಬ್ಬರಾಗಿದ್ದಾರೆ. ನವ್ಯಸಾಹಿತ್ಯ ಆಗತಾನೇ ಪ್ರಾರಂಭವಾಗಿದ್ದ ಕಾಲದಲ್ಲಿ ತೇಜಸ್ವಿಯವರು ಕಥೆಯನ್ನು ಬರೆಯಲು ಪ್ರಾರಂಭಿಸಿದರು. ಶ್ರೀಸಾಮಾನ್ಯನ ಜೀವನವನ್ನು ಕೇಂದ್ರವಾಗಿಟ್ಟು

ಕೊಂಡು ಕಥೆ ಹೆಣೆಯುವ ತೇಜಸ್ವಿಯವರು ಮನುಷ್ಯ ಬದುಕಿನ ಹಿಂದೆ ಇರುವ ನಿಗೂಢತೆಯನ್ನು, ಯಶಸ್ಸು ಮತ್ತು ವೈಫಲ್ಯಗಳನ್ನು ತಮ್ಮ ಕಥೆಗಳ ಮೂಲಕ ಹಾಸ್ಯ ಸನ್ನಿವೇಶಗಳ ಮುಖಾಂತರ ಸ್ವಾರಸ್ಯಕರವಾಗಿ ಚಿತ್ರಿಸಿದ್ದಾರೆ. ತೇಜಸ್ವಿಯವರು ತಾವು ಪಡೆದ ಅನುಭವಗಳನ್ನು ಸಮರ್ಥವಾದ ರೀತಿಯಲ್ಲಿ ಹಾಸ್ಯಮಯವಾಗಿ ಹೇಳುವ ಕಲೆಗಾರಿಕೆಯನ್ನು ಸಾಧಿಸಿಕೊಂಡಿದ್ದಂತಹವರು. ಕನ್ನಡದ ನವ್ಯಲೇಖಕರಲ್ಲಿ ಕಂಡುಬರುವ ಸಾಹಿತ್ಯಿಕ ಕಲೆಗಾರಿಕೆ ಮತ್ತು ಜೀವನ ಕ್ರಮವನ್ನು ಸೂಕ್ಷ್ಮವಾಗಿ ಗ್ರಹಿಸಬಲ್ಲ ಅರ್ಥಪೂರ್ಣ ಕಲಾಭಿಜ್ಞತೆ ತೇಜಸ್ವಿಯವರಲ್ಲಿ ಕಂಡುಬರುತ್ತದೆ.

ತೇಜಸ್ವಿಯವರ ಸಾಹಿತ್ಯದ ಬಗ್ಗೆ ಅನೇಕ ವಿಮರ್ಶಾ ಕೃತಿಗಳು ಪಿ.ಎಚ್.ಡಿ ಪ್ರಬಂದಗಳೂ ಬಂದಿವೆ. ವಿಚಾರಗೋಷ್ಠಿಗಳು ಅವರ ಸಾಹಿತ್ಯ ಕೃಷಿಯನ್ನು ವಿಮರ್ಶಿಸಿ ಪುಸ್ತಕಗಳಾಗಿ ಹೊರತಂದಿದೆ. ಡಾ.ಎಚ್.ಎಂ.ಮಹೇಶ್ವರಯ್ಯನವರು ಪೂರ್ಣಚಂದ್ರ ತೇಜಸ್ವಿಯವರ ಜೀವನ ವಿಧಾನ ಹಾಗೂ ಅವರ ಕೃತಿಗಳ ಬಗ್ಗೆ ವಿಮರ್ಶಿಸಿ ಪುಸ್ತಕವನ್ನು ಬರೆದಿದ್ದಾರೆ. ಹಾಗೆಯೇ ಜಿ.ಟಿ.ವೀರಪ್ಪ ತೇಜಸ್ವಿಯವರ ಸಾಹಿತ್ಯ ಕೃಷಿಯ ಬಗ್ಗೆ ಬರೆದಿದ್ದಾರೆ. ಹಾಗೆಯೇ ಡಾ.ಎಚ್.ಶಶಿಕಲಾ ರವರು ತೇಜಸ್ವಿಯವರ ಸಾಹಿತ್ಯದ ಹಿನ್ನೆಲೆಯಲ್ಲಿ 'ಏಕ-ಅನೇಕ' ಎಂಬ ಪಿ.ಎಚ್.ಡಿ ಪ್ರಬಂದವನ್ನು ಹೊರತಂದಿದ್ದಾರೆ. ಹಾಗೆಯೇ ಟಿ.ಪಿ.ಅಶೋಕರವರು 'ತೇಜಸ್ವಿ ಕಥನ' ಎಂಬ ಪುಸ್ತಕ ಹೊರತಂದು ಅವರ ಸಾಹಿತ್ಯಕಥನದ ಬಗ್ಗೆ ವಿಮರ್ಶೆ ಮಾಡಿದ್ದಾರೆ. ಹಾಗೆಯೇ ಲಂಕೇಶ್‌ರವರ ಪ್ರಸ್ತುತ ಡಿ.ವಿ.ಪ್ರಹ್ಲಾದ್ ರವರ ತೇಜಸ್ವಿಲೋಕ, ಹೀಗೆ ಹತ್ತು ಹಲವಾರು ರೀತಿಯಲ್ಲಿ ತೇಜಸ್ವಿಯವರ ಸಾಹಿತ್ಯ ಕೃತಿಗಳನ್ನು ವಿಮರ್ಶಿಸಿ ಅವುಗಳಿಗೆ ಒಂದು ಹೊಸ ಮೆರುಗನ್ನು ಕೊಟ್ಟಿರುವುದನ್ನು ಗಮನಿಸಬಹುದಾಗಿದೆ. ಆದರೆ ಇದುವರೆಗೂ ಅವರ ಹಾಸ್ಯಶೈಲಿಯ ಬಗ್ಗೆ ಯಾವುದೇ ಪುಸ್ತಕಗಳು ಹೊರಬಂದಿಲ್ಲ. ಆದ್ದರಿಂದ ಕೆ.ಪಿ.ಪೂರ್ಣಚಂದ್ರತೇಜಸ್ವಿಯವರ ಕಥೆಗಳಲ್ಲಿ ಹಾಸ್ಯದ ವೈಶಿಷ್ಟತೆ ಹಾಗೂ ನಿರೂಪಣಾ ತಂತ್ರ ಮತ್ತು ಬಗೆಗಳನ್ನು ಗುರುತಿಸಿ ಅವರು ಹಾಸ್ಯ ವ್ಯಕ್ತಪಡಿಸಿರುವ ಬಗೆಯ ವಿಶ್ಲೇಷಣೆ ಮಾಡುವುದು ನನ್ನ ಅಧ್ಯಯನದ ಉದ್ದೇಶವಾಗಿದೆ.

ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರ ಕತೆಗಳನ್ನು ಅಭ್ಯಸಿಸಿದಾಗ ಹೆಚ್ಚು ಸಹಜತೆಯೊಂದಿಗೆ ಅವರ ನಿರೂಪಣಾ ಶೈಲಿ ಹೊರ ಹೊಮ್ಮಿರುವುದು ಅವರ ಪ್ರತಿಭೆಗೆ ಹಿಡಿದ ಕನ್ನಡಿಯಾಗಿದೆ. ನನ್ನ ನಿಬಂಧದ ಎರಡನೆಯ ಅಧ್ಯಾಯವು ಪ್ರಾಚೀನ ಕವಿಗಳು ತಮ್ಮ ಕಥೆಗಳಲ್ಲಿ ಹಾಸ್ಯ ಬಳಸಿಕೊಂಡಿರುವ ಬಗ್ಗೆ ಸಂಕ್ಷಿಪ್ತ ವಿವರವನ್ನು ನೀಡಲಾಗಿದೆ. ಮೂರನೆಯ ಅಧ್ಯಾಯವು ತೇಜಸ್ವಿಯವರ ಜೀವನ ನಡೆದು ಬಂದ ಬಗೆ ಅವರು ಬರೆದಂತಹ ಕೃತಿಗಳು ಅವರಿಗೆ ಬಂದಂತಹ ಪ್ರಶಸ್ತಿ ಪುರಸ್ಕಾರಗಳ ಬಗ್ಗೆ ಪೂರ್ಣ ಬೆಳಕನ್ನು ಚೆಲುತ್ತದೆ. ನನ್ನ ನಾಲ್ಕನೇ ಅಧ್ಯಾಯದಲ್ಲಿ ಪ್ರಮುಖ ಹಾಸ್ಯಕತೆಗಾರರೆಂದು ಪ್ರಸಿದ್ಧರಾದ ಎ.ಆರ್.ಕೃಷ್ಣಶಾಸ್ತ್ರಿ, ಶ್ರೀ.ಕೆ.ಗೋಪಾಲಕೃಷ್ಣರಾಯರು, ಅ.ನ.ಕೃ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಕತೆಗಳಲ್ಲಿನ ಹಾಸ್ಯಕ್ಕೂ ತೇಜಸ್ವಿ ತಮ್ಮ ಕಥೆಗಳಲ್ಲಿ ತಂದಿರುವ ಹಾಸ್ಯವನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಐದನೇ ಅಧ್ಯಾಯದಲ್ಲಿ ತೇಜಸ್ವಿಯವರು ತಮ್ಮ ಕಥೆಗಳಲ್ಲಿ ಹಾಸ್ಯವನ್ನು

ನಿರೂಪಿಸಿರುವ ತಂತ್ರಗಾರಿಕೆಯನ್ನು ಅವರ ಹಾಸ್ಯದ ಸ್ವರೂಪವನ್ನು ಅವರು ಹಾಸ್ಯವನ್ನು ಯಾವ ಬಗೆಯಲ್ಲಿ ಬಳಸಿಕೊಂಡಿದ್ದಾರೆ ಎಂಬುದನ್ನು ಅವರು ತಮ್ಮ ಕಥೆಗಳಲ್ಲಿ ಹಾಸ್ಯ ವ್ಯಕ್ತಪಡಿಸಿರುವ ತಂತ್ರದ ಬಗ್ಗೆ ವಿಶ್ಲೇಷಿಸಲಾಗಿದೆ. ಆರನೇ ಅಧ್ಯಾಯದಲ್ಲಿ ತೇಜಸ್ವಿ ಕತೆಗಳಲ್ಲಿ ಹಾಸ್ಯ ಎಂಬುದು ಯಾವ ರೀತಿ ವಿಡಂಬನಾತ್ಮಕವಾಗಿ ಬಂದಿದೆ. ಹಾಗೂ ವಿಡಂಬನೆಯ ಸ್ವರೂಪವನ್ನು ಚರ್ಚಿಸಲಾಗಿದೆ. ಹಾಗೆಯೇ ಅವರ ಕತೆಗಳ ಹಾಸ್ಯ ಪ್ರಸಂಗಗಳಲ್ಲಿ ಬರುವ ಪಾತ್ರಗಳ ಹಿನ್ನೆಲೆ ಅವರ ವ್ಯಕ್ತಿತ್ವ ಮುಗ್ಧ ಪಾತ್ರಗಳ ಮೂಲಕ ತೇಜಸ್ವಿ ಹಾಸ್ಯವನ್ನು ತಂದಿರುವ ಕ್ರಮ, ಆ ಪಾತ್ರಕ್ಕೆ ತಕ್ಕಂತೆ ಹಾಸ್ಯ ಹೊಂದಿಕೊಂಡಿರುವ ರೀತಿಯನ್ನು ವಿಶ್ಲೇಷಿಸಲಾಗಿದೆ ಹಾಗೂ ಅವರು ಹಾಸ್ಯವನ್ನು ಯಾವ ಉದ್ದೇಶಕ್ಕಾಗಿ ತಮ್ಮ ಕೃತಿಗಳಲ್ಲಿ ತಂದಿದ್ದಾರೆ. ಅವರು ಹಾಸ್ಯ ನಿರೂಪಿಸಲು ಬಳಸುವ ಭಾಷೆ ಎಂತಹುದು ಹಾಸ್ಯವನ್ನು ತರುವಲ್ಲಿ ತಮ್ಮ ವೈಚಾರಿಕ ನಿಲುವುಗಳನ್ನು ಹೇಗೆ ಪ್ರತಿಪಾದಿಸಿದ್ದಾರೆ ಎಂಬುದನ್ನು ವಿಶ್ಲೇಷಿಸಲಾಗಿದೆ. ನನ್ನ ಅಧ್ಯಯನ ಸ್ವರೂಪವು ಒಟ್ಟಾರೆ ಅವರ ಕಥೆಗಳಲ್ಲಿ ಹಾಸ್ಯದ ಪ್ರತ್ಯೇಕತೆ ಏನು ಒಟ್ಟಾರೆ ಕಥೆಯ ಸಾರಾಂಶವನ್ನು ಅಲ್ಲಿ ಬರುವಂತಹ ಹಾಸ್ಯ ಪ್ರತಿಬಂಬಿಸುತ್ತದೆಯೇ? ಅವರು ಹಾಸ್ಯ ತಂದಿರುವ ಉದ್ದೇಶವೇನು?ಎಂಬುದರ ಬಗ್ಗೆ ವಿಶ್ಲೇಷಣೆ ಮಾಡುವುದಾಗಿದೆ.

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ತೇಜಸ್ವಿ ಮಹತ್ವದ ಲೇಖಕರಾಗಿ ನಮ್ಮ ಮುಂದೆ ನಿಲ್ಲುತ್ತಾರೆ. ಕವಿ, ನಾಟಕಕಾರ, ಅನುವಾದಕ, ಕಾದಂಬರಿಕಾರ, ಕಥೆಗಾರ, ಪರಿಸರವಿಜ್ಞಾನಿ, ಚಿಂತಕ, ಸಮಾಜಶಾಸ್ತ್ರಜ್ಞ ಹೀಗೆ ಹತ್ತು ಹಲವು ವಿಧದಲ್ಲಿ ಅವರ ವ್ಯಕ್ತಿತ್ವದ ಹರವು ವಿಸ್ತರಿಸಿಕೊಳ್ಳುತ್ತದೆ. ಪಂಡಿತ ಪುತ್ರರೆಲ್ಲಾ ಪಾಂಡಿತ್ಯವಂತರಾಗುವುದಿಲ್ಲ ಎಂಬುದಕ್ಕೆ ಅಪವಾದವೆನ್ನುವಂತೆ ತೇಜಸ್ವಿಯವರು ಮಹಾಕವಿ ಕುವೆಂಪುರವರ ಮಗನಾಗಿ ನಮ್ಮ ನಡುವಿನ ಮಹತ್ವದ ಲೇಖಕರಾಗಿದ್ದಾರೆ. 'ಕಾರಂತರ ಪ್ರಯೋಗಶೀಲತೆ, ಕುವೆಂಪುರವರ ಕಲಾತ್ಮಕತೆ, ಲೋಹಿಯಾ ಅವರ ವಿಚಾರಧಾರೆಗಳು, ಜೀವನಪ್ರತಿ ಪ್ರಯೋಗಗಳು ತೇಜಸ್ವಿಯವರ ಬರವಣಿಗೆಯ ಪ್ರೇರಣೆಗಳಾಗಿವೆ. ಶ್ರೇಷ್ಠ ಸಾಮಾಜಿಕ ಚಿಕಿತ್ಸಕರಾದ ತೇಜಸ್ವಿ ಸಮಾಜದ ಹತ್ತು ಹಲವು ರೋಗಗಳನ್ನು ಸಮರ್ಥವಾಗಿ ಗುರುತಿಸಿದ್ದಾರೆ. ತಮ್ಮ ಕೃತಿಗಳಲ್ಲಿ ಮಲೆನಾಡಿನ ಜನರ ಬದುಕಿನ ಆರ್ಥಿಕ ಅಸಮಾನತೆಗಿಂತ ಸಾಂಸ್ಕೃತಿಕ ಅಸಮಾನತೆಯ ಚಿತ್ರಣಗಳನ್ನು ನೀಡುತ್ತಾರೆ. ಕಲಾತ್ಮಕ ಕಾದಂಬರಿಗಳನ್ನು ಕೊಡುಗೆಯನ್ನಾಗಿ ನೀಡಿದ ಕೀರ್ತಿ ಅವರದು.

ಅವರ ಕೃತಿಗಳಲ್ಲಿ ಹಾಸ್ಯದ ಬಳಕೆಯನ್ನು ಕಂಡು ಟೀಕಿಸಿದವರನ್ನು ತೇಜಸ್ವಿಯವರು ಅವರಿಗೆ ಪ್ರತ್ಯುತ್ತರವಾಗಿ "ನನ್ನ ಕೃತಿಗಳನ್ನು ಓದುವ ಸಂತೋಷಕ್ಕಾಗಿ ಓದುವವರನ್ನು ಕೇವಲ ಮಜಾವಾದಿಗಳೆಂದು ನೀವು ಟೀಕಿಸಿದ್ದು ನನಗೆ ಅಷ್ಟು ಸಮಂಜಸವಾಗಿ ಕಾಣುತ್ತಿಲ್ಲ. ಸಾಹಿತ್ಯದ ಉದ್ದೇಶಗಳಲ್ಲಿ ಮನರಂಜನೆಯು ಒಂದು ಎಂಬುದನ್ನು ಮರೆಯಬಾರದು. ನಾನು ತಿಳಿದಂತೆ ಒಂದು ಕೃತಿಯನ್ನು ಅದರ ತಾತ್ವಿಕತೆಗಾಗಿ ಓದುವವರಿಗಿಂತಲೂ ಭಾಷೆಯ ಸಾಹಿತ್ಯಿಕ ಬಳಕೆಯನ್ನು ಮೆಚ್ಚಲು ಓದುವವರು ಹೆಚ್ಚು ಕಾಲ ಸಾಹಿತ್ಯ ಕ್ಷೇತ್ರದಲ್ಲಿ ಉಳಿಯುತ್ತಾರೆ. ನಮ್ಮೆಲ್ಲ ಸಾಹಿತ್ಯಾಸಕ್ತಿಯ ಹಿಂದೆ ಓದುವ ಚಪಲವೂ

ಇರುತ್ತದಲ್ಲವೇ? ಎಷ್ಟೋ ಸಾರಿ ಒಂದು ಪುಸ್ತಕದ ಓದು ಕೊನೆ ಮುಟ್ಟುತ್ತಿದ್ದಂತೆಯೇ ಇದು ಮುಗಿದು ಹೋದರೆ ಏನಪ್ಪಾ ಮಾಡುವುದು ಎಂದು ಚಿಂತಿಸಿಲ್ಲವೇ" ಎನ್ನುವ ಇವರ ಮಾತು ಹಾಸ್ಯವನ್ನೊಳಗೊಂಡ ಭಾಷೆಯ ಪ್ರಾಮುಖ್ಯತೆ ಕತೆಗಳಲ್ಲಿ ಎಷ್ಟು ಮುಖ್ಯ ಎಂಬುದನ್ನು ತಿಳಿಸುತ್ತದೆ.

ತೇಜಸ್ವಿಯವರು ಬಹುತೇಕ ಎಲ್ಲಾ ಕೃತಿಗಳಲ್ಲೂ ಹಾಸ್ಯವನ್ನು ಅಭಿವ್ಯಕ್ತಿಸಿರುವುದನ್ನು ಕಾಣಬಹುದು. ಆದರೆ ಅವರ ಕಥಾಸಂಕಲನಗಳಾದ ಕಿರಿಗೂರಿನ ಗಯ್ಯಾಳಿಗಳು, ಅಬಚೂರಿನ ಪೋಸ್ಟಾಫೀಸ್, ಹುಲಿಯೂರಿನ ಸರಹದ್ದು, ಪಾಕಕ್ರಾಂತಿ, ಪರಿಸರದ ಕತೆಗಳು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿವೆ.

# ಅಧ್ಯಾಯ – ೨

## ಕನ್ನಡ ಕಥೆಗಳಲ್ಲಿ ಹಾಸ್ಯ ಬೆಳೆದು ಬಂದ ಬಗೆಯ ಸಂಕ್ಷಿಪ್ತ ವಿವರ

"ವಾಕ್ಯಂ ರಸಾತ್ಮಕಂ ಕಾವ್ಯ" ಎಂದರೆ ಕಾವ್ಯದ ಜೀವಾಳ ರಸ ಎಂದು. ಒಂದು ಸಾಹಿತ್ಯ ಕೃತಿಯಲ್ಲಿ ನವರಸಗಳು ತುಂಬಾ ಮುಖ್ಯ ಅದರಲ್ಲೂ ಹಾಸ್ಯರಸ ಇದ್ದರಂತೂ ಅದು ಓದುಗರ ಮನದಲ್ಲಿ ಅಚ್ಚಳಿಯದೇ ನಿಂತುಬಿಡುತ್ತದೆ. ಪ್ರಾಚೀನ ಕಾಲದಲ್ಲಿ ಶ್ರಮಜೀವಿಯಾಗಿದ್ದ ಮನುಷ್ಯ ತನ್ನ ಬಿಡುವಿನ ವೇಳಿಯಲ್ಲಿ ಬಯಲಾಟ, ನಾಟಕ, ಕ್ರೀಡೆ ಇವುಗಳಿಂದ ಮನರಂಜನೆ ಪಡೆಯುತ್ತಿದ್ದ. ಅನಂತರ ಅವನಿಗೆ ಅಕ್ಷರಜ್ಞಾನ ಬಂದ ಮೇಲೆ ತನ್ನ ಭಾವನೆಗಳನ್ನೇ ಭಾಷೆಯನ್ನಾಗಿಸಿ, ಭಾಷೆಗೆ ಅಕ್ಷರದ ರೂಪ ಕೊಟ್ಟು ಸಾಹಿತ್ಯ ರಚನೆ ಮಾಡಿದ. ಇಂತಹ ಸಾಹಿತ್ಯದಲ್ಲಿ ನವರಸಗಳನ್ನು ತುಂಬಿದ. ಏಕೆಂದರೆ ಇಲ್ಲೂ ಸಹ ಅವನಿಗೆ ಮನರಂಜನೆಯ ಅವಶ್ಯಕತೆ ಇತ್ತು. ಆದ್ದರಿಂದ ಅಲ್ಲಲ್ಲಿ ಹಾಸ್ಯರಸವನ್ನು ತನ್ನ ಸಾಹಿತ್ಯ ಕೃತಿಗಳಲ್ಲಿ ಬಳಸುತ್ತಾ ಬಂದ. ಇದರಿಂದ ಜ್ಞಾನಾರ್ಜನೆಯ ಮೂಲಕವು ಅವನಿಗೆ ಮನರಂಜನೆ ದೊರೆಯಿತು.

ಭಾರತೀಯ ತತ್ವವಿವೇಚನೆಯಲ್ಲಿ ಹಾಸ್ಯಕ್ಕೆ ಯೋಗ್ಯಸ್ಥಾನವನ್ನು ಕಲ್ಪಿಸಿದ್ದರೂ, ಸಾಹಿತ್ಯದಲ್ಲಿ ಅದು ಗೌಣವೆಂದೇ ಹೇಳಬೇಕು. ವೀರ, ಕರುಣ, ಶೃಂಗಾರ ಇವು ಪ್ರಧಾನ ರಸಗಳೆಂದೂ ಮಹಾಕಾವ್ಯದಲ್ಲಿ ಅವು ಅವಶ್ಯವಾಗಿ ಇರಲೇಬೇಕೆಂದೂ ಕಟ್ಟುಹಾಕಿದ ಅಲಂಕಾರಿಕರು. ಮಹತ್ವದ ಸ್ಥಾನವನ್ನು ಹಾಸ್ಯಕ್ಕೆ, ಅಂತೆಯೇ ಇನ್ನುಳಿದ ರಸಗಳಿಗೆ ಕೊಟ್ಟಿಲ್ಲ ಎಂಬುದು ಸುಸ್ಪಷ್ಟ. ಧರ್ಮದ ಆಶ್ರಯದಲ್ಲಿ, ತಾತ್ವಿಕಹಿನ್ನೆಲೆಯಲ್ಲಿ ಬೆಳೆದುಬಂದ ಭಾರತೀಯರ ಜೀವನ. ಅಂತೆಯೇ ಸಾಹಿತ್ಯ ಗಂಭೀರ ಸ್ವರೂಪವನ್ನು ತಳೆದು ಹೆಚ್ಚು ವಿಚಾರ ಪ್ರಧಾನವಾದರೂ ಸ್ವಾಭಾವಿಕವಾಗಿದೆ. ಅವರ ಸಾಹಿತ್ಯರಸ ಪ್ರವಾಹದಲ್ಲಿ ಹಾಸ್ಯದ ಹೊನಲು ಕಡಿಮೆ ಎಂದೇ ಹೇಳಬೇಕು. ಕನ್ನಡ ಜನ ಹಾಗೂ ಸಾಹಿತ್ಯ ಭಾರತೀಯ ಹಿನ್ನೆಲೆಯಲ್ಲಿ ಮುನ್ನೆಡೆದುದರಿಂದ ಈ ಸಾಮಾನ್ಯ ನಿಯಮಕ್ಕೆ ಅಪವಾದವಾಗಿಲ್ಲ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಶೃಂಗಾರ, ವೀರ, ಕರುಣಗಳಂತೆ ಹಾಸ್ಯಕ್ಕೆ ಪ್ರಧಾನಪಟ್ಟ ಸಂದಿಲ್ಲವೆಂಬುದು ಸುಸ್ಪಷ್ಟ. ಆದರೆ ಕನ್ನಡ ಜನರು, ರಸಿಕರೂ, ಚತುರರು, ಹಾಗೂ ವಿನೋದಪ್ರಿಯರು. ಸಂಪ್ರದಾಯದ ಬಿಗಿತದಲ್ಲಿ ಹಾಸ್ಯರಸಕ್ಕೆ ಸಾಹಿತ್ಯದಲ್ಲಿ ಹಿರಿಯಸ್ಥಾನ ಸಲ್ಲದಿದ್ದರೂ ಅಲ್ಲಲ್ಲಿ ಅದರ ಝಳಕು ಹೊಳಪು ಕಾಣಬಹುದಾಗಿದೆ.

ಹಾಸ್ಯವು ಜೀವನದಲ್ಲಿ ಎಷ್ಟು ಮುಖ್ಯವೋ, ಅಷ್ಟೇ ಜಗತ್ತಿನ ಸಾಹಿತ್ಯದಲ್ಲಿ ಕೂಡ ಮಹತ್ವದ ಸ್ಥಾನ ಪಡೆದುಕೊಂಡಿದೆ. ಆಂಗ್ಲ ಸಾಹಿತ್ಯ ಹಾಸ್ಯಕ್ಕೆ ಮಹತ್ವ ಸ್ಥಾನ ನೀಡಿದರೆ ಮತ, ಧರ್ಮ, ತತ್ವ ಇವುಗಳ ವಿವೇಚನೆಗೆ ಮಹತ್ವಕೊಟ್ಟ ಭಾರತೀಯರು ತಮ್ಮ ಸಾಹಿತ್ಯದಲ್ಲಿ ಹಾಸ್ಯರಸಕ್ಕೆ ಯೋಗ್ಯಸ್ಥಾನವಿತ್ತಿಲ್ಲವೆಂಬುದು ಪಾಶ್ಚಾತ್ಯ ವಿಮರ್ಶಕರ ಅಭಿಪ್ರಾಯವಾಗಿದೆ. ಕನ್ನಡ ಸಾಹಿತ್ಯದ ಮಟ್ಟಿಗೆ

ಇದರ ಅಭಿಪ್ರಾಯ ಸೂಕ್ತವೆಂದೇ ಹೇಳಬಹುದು. ಏಕೆಂದರೆ ಧರ್ಮ, ಮೋಕ್ಷ, ಪ್ರಕೃತಿವರ್ಣನೆಗೆ ಹೆಚ್ಚು ಗಮನವಿತ್ತ ಕನ್ನಡ ಕವಿಗಳು ಹಾಸ್ಯವನ್ನು ಅಷ್ಟಾಗಿ ಬಳಸಿಕೊಂಡಿಲ್ಲ. ಇನ್ನು ಕಥೆಗಳ ಮಟ್ಟಿಗೆ ಹೇಳುವುದಾದರೆ ಹಾಸ್ಯವನ್ನೇ ಉದ್ದೇಶವಾಗಿಟ್ಟುಕೊಂಡು ಕಥೆ ಬರೆದವರು ತುಂಬಾ ಕಡಿಮೆ ಎಂದು ಹೇಳಬಹುದು. ತುಂಬಾ ಪ್ರಾಚೀನಕ್ಕೆ ಬಂದರೆ ಕವಿ ಹರಿಹರದೇವನು ತನ್ನ ಸರಿಸಂವಾದ ಶಿವಶರಣರ ಕಥೆಗಳನ್ನು ರಗಳೆಗಳಲ್ಲಿ ಹಿಡಿದಿಟ್ಟನು. ಹಾಗೆಯೇ ಲಕ್ಷ್ಮೀಶನು ಮೂಲ ಅಶ್ವಮೇಧಕಥೆಗೆ ಚಂಡಿ ಮತ್ತು ಚಂದ್ರಹಾಸರ ಕತೆಗಳನ್ನು ಬೆರೆಸಿ ಹೇಳಿದನು.

ಇದು ಹಿಂದಿನ ಕವಿಗಳ ವೈಖರಿಯಾದರೆ, ನಂತರದಲ್ಲಿ ಬಂದ ತೆನಾಲಿರಾಮ ಹಾಗೂ ಬೀರಬಲ್ಲರ ಕತೆಗಳೂ ಚಮತ್ಕಾರಿತಭರಿತವಾಗಿ ಹಾಸ್ಯಪ್ರಧಾನವಾದವು. ನಂತರ ನಾವು ಜನಪದ ಕತೆಗಳಲ್ಲಿ ಇಂತಹ ಹಾಸ್ಯಮಯ ಕಥೆಗಳನ್ನು ಹೆಚ್ಚಾಗಿ ಕಾಣಬಹುದು. ಉದಾ:-"ಜಂತದಕ್ಕಯ್ಯ ಕಥೆ, 'ಮಂಕುಭಟ್ಟನ ಕಥೆ, ಕಪಿಹಾರಿದ ಕಥೆ, ಹೆಂಟೆ ಗೊದ್ದನ ಕಥೆ, ಕುರುಡರ ಕಥೆ, ಮುಂತಾದವು ಹಾಸ್ಯಭರಿತ ಕಥೆಗಳೆಂದು ಪ್ರಸಿದ್ಧವಾಗಿದೆ"[7] ನಂತರ ಬಂದ ಮುದ್ದಣ್ಣ ತನ್ನ ರಾಮಾಶ್ವಮೇಧ ಕಥೆಯನ್ನು ಮುದ್ದಣ್ಣ ಹಾಗೂ ಮನೋರಮೆಯ ಸಂಭಾಷಣಾ ಶೈಲಿಯಲ್ಲಿ ಹಾಸ್ಯಮಯವಾಗಿ ಹೇಳಿದ್ದಾನೆ. ಇದು ಆಧುನಿಕ ಸಾಹಿತ್ಯದ ಪ್ರಾರಂಭವಾದರೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲು ಕಥೆ ಹೆಣೆದುಹೇಳಿದ ದಿವಂಗತ. ಪಂಜೆಮಂಗೇಶರಾಯರು ಸಣ್ಣಮಕ್ಕಳಿಗಾಗಿಯೆ ಬರೆದ ಕಥೆಗಳಲ್ಲಿ ತಿಳಿಹಾಸ್ಯವನ್ನು ಕಾಣಬಹುದಾಗಿದೆ. ನಂತರ ಬಂದ ಕೆರೂರು ವಾಸುದೇವಚಾರ್ಯರ ಕಥೆಗಳಲ್ಲಿ ಹಾಸ್ಯವಿದ್ದರೂ ಸಹ ಸ್ವಾರಸ್ಯಕರವಾಗಿಲ್ಲ ಎಂದು ಹೇಳಬಹುದು. ಅದೇ ಸುಮಾರಿಗೆ ಶ್ರೀ.ಎಂ.ಎನ್.ಕಾಮತ್‌ರು ಬರೆದ ಕಥೆಗಳು ಹೆಚ್ಚು ಕಲಾಪೂರ್ಣವಾಗಿ ಸ್ವಲ್ಪಮಟ್ಟಿಗೆ ಹಾಸ್ಯ ಬಳಕೆ ಕಾಣಬಹುದು. ಆದರೆ ಸ್ವಲ್ಪದಿನಗಳಲ್ಲಿ ಸುವ್ಯವಸ್ಥಿತವಾಗಿ ಹಾಸ್ಯವನ್ನು ಬಳಸಿಕೊಂಡು ಕಥೆಗಳನ್ನು ಬರೆದವರೆಂದರೆ ಪ್ರೊ.ಎ.ಆರ್.ಕೃಷ್ಣಶಾಸ್ತ್ರೀಗಳು. ಅವರ 'ಶ್ರೀಪತಿಯ ಕಥೆಗಳು' ಹೆಚ್ಚು ಜನಾದರಣೀಯವಾದವು. ಈ ಕಥಾಸಂಗ್ರಹದಲ್ಲಿ ಬರುವ ನನ್ನ ಸ್ನೇಹಿತೆ, ಜ್ಯೋತಿಪಕ್ಕೆ ಬಹುಮಾನ, ಶಾನುಭೋಗನ ಪುಣ್ಯ, ಹುಚ್ಚೋ ಅಲ್ಲವೋ?, ಅಗ್ಗದಮದುವೆ, ಬಂಗಾಲಿಯ ವಾಸ, ಮುಂತಾದ ಕತೆಗಳು ರಸಭರಿತವಾಗಿದ್ದು, ಹಾಸ್ಯದಿಂದ ಕೂಡಿದೆ. ಪ್ರೊ.ಕೃಷ್ಣಶಾಸ್ತ್ರೀಗಳ ಗದ್ಯಶೈಲಿ ಮನೋಹರವಾಗಿರುವುದರಿಂದ ಅವು ಕೂಡಲೇ ಓದುಗರರ ಮನವನ್ನು ಸೆಳೆಯುತ್ತದೆ. ನೀತಿಯೇ ಕಥೆಗಳ ಮೂಲ ಉದ್ದೇಶವಾದರೂ ಅದನ್ನು ಹಾಸ್ಯಮಯವಾಗಿ ಹೇಳುವಲ್ಲಿ ಕತೆಗಾರರ ಕಥನ ಕೌಶಲ ಅಡಕವಾಗಿದೆ.

ಶ್ರೀಪತಿಯ ಕಥೆಗಳಲ್ಲಿ ದುಃಖದ ಚಿತ್ರಗಳೇ ಹೆಚ್ಚಾಗಿದ್ದರೂ ಕತೆಗಾರರು ಸ್ವತಃ ರಸಿಕವಾಗಿರುವುದರಿಂದ ಕತೆಗಳ ಮಧ್ಯದಲ್ಲಿ ಹಾಸ್ಯದ ಆವರಣ ಹೆಣೆಯಲು ಯತ್ನಿಸಿದ್ದಾರೆ. ಹಾಗೆಯೇ ಇವರ 'ಅಗ್ಗದಮದುವೆ' ಹಾಗೂ 'ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ' ಈ ಎರಡೂ ಕತೆಗಳಲ್ಲಿ ಸರಸ, ಹಾಸ್ಯ ಮಡುಗಟ್ಟಿ ನಿಂತಿದೆ. ನಂತರದಲ್ಲಿ ಶ್ರೀನಿವಾಸರ ಕಥೆಗಳಲ್ಲಿ ನಾವು ನಿರಾಡಂಬರ ಸರಳ ಹಾಸ್ಯ ಹಾಗೂ

ಗಾಂಭೀರ್ಯತೆಯನ್ನು ಕಾಣಬಹುದಾಗಿದೆ. ಇದರಿಂದ ಇವರ ಕಥೆಗಳು ಹೆಚ್ಚು ಜನಪ್ರಿಯವಾದವು. ಅವರ ಕಥೆಗಳನ್ನು ಜನರು ಹೆಚ್ಚಾಗಿ ಮೆಚ್ಚಲು ಕಾರಣವೆಂದರೆ ಅವರ ಕಥೆಗಳಲ್ಲಿ ಅಡಕವಾಗಿರುವ ಸರಸ ಹಾಸ್ಯ. ಅವರ ಬರಹದಲ್ಲಿ ನಾವು ವಿಕಾಸ, ವಿಲಾಸಗಳೆರಡನ್ನೂ ಕಾಣಬಹುದಾಗಿದೆ. ನವರಸಗಳಲ್ಲಿ ಹಾಸ್ಯರಸ ಒಲಿದಷ್ಟು ಮತ್ತಾವ ರಸವು ಅವರಿಗೆ ಒಲಿದಿಲ್ಲ. ಉದಾ:-ಅವರ ವೆಂಕಟಶಾಮಿಯ ಪ್ರಣಯ, ಮೊಸರಿನ ಮಂಗಮ್ಮ ಕಥೆಗಳಲ್ಲಿ ಸರಸ ಹಾಸ್ಯವನ್ನು ಕಾಣಬಹುದಾಗಿದೆ. ಶೃಂಗಾರ ರಸದೊಡನೆ ಹಾಸ್ಯವನ್ನು ಬೆರೆಸಿ ನಕ್ಕು ನಗಿಸುವ ಕಲೆ ಶ್ರೀನಿವಾಸರಿಗೆ ದೈವದತ್ತವಾಗಿ ಬಂದಿದೆ ಎಂದು ಹೇಳಬಹುದು. ಶ್ರೀನಿವಾಸರ ಸಣ್ಣಕತೆಗಳನ್ನು ಓದಿ, ಸ್ಫೂರ್ತಿ ಪಡೆದವರಲ್ಲಿ ಮುಖ್ಯವಾಗಿ ಆನಂದರು ಹಾಗೂ ಕೆ.ಗೋಪಾಲಕೃಷ್ಣರಾಯರು ಅವರಿಬ್ಬರ ಶ್ರಮದ ಫಲವಾಗಿ ಕನ್ನಡದಲ್ಲಿ ಒಳ್ಳೆಯ ಕತೆಗಳ ಸುಗ್ಗಿಯೇ ನಡೆಯಿತು. ಆನಂದರ ಕತೆಗಳಲ್ಲಿ ಗಾಂಭೀರ್ಯಕ್ಕಿಂತ ಕಥಾರಚನೆಯ ಸೌಂದರ್ಯಕ್ಕೆ ಹೆಚ್ಚು ಮಹತ್ವವಿದೆ. ಅವರ ಸಣ್ಣಕತೆಗಳು ಸತ್ವಯುತವಾಗಿದ್ದು, ಉತ್ತಮವಾಗಿದೆ. ಅವರ ಬೇವು-ಬೆಲ್ಲ, ಕಥಾಸಂಗ್ರಹವನ್ನು ಗಮನಿಸಿದಾಗ ಅವರಲ್ಲಿ ಬರುವ 'ಮಾಟಗಾತಿ', 'ಹೆಂಡತಿಯ ಕಾಗದ', 'ಬದುಕು' ಮುಂತಾದ ಕತೆಗಳು ಕಲಾಪ್ರೌಢಿಮೆಯಿಂದ ಕೂಡಿದ್ದು ಸ್ವಾರಸ್ಯಮಯವಾಗಿದೆ. ಕಥಾಸಂಗ್ರಹದ ಹೆಸರೇ ಸೂಚಿಸುವಂತೆ ಬೇವಿನ ಕಹಿ ಬೆಲ್ಲದ ಸಿಹಿಯನ್ನು ಇವರ ಕಥೆಗಳಲ್ಲಿ ನಾವು ಕಾಣಬಹುದು. ಇವರು ಬರೆದ 'ಹೆಂಡತಿಯ ಕಾಗದ' ಹೆಚ್ಚು ಹಾಸ್ಯಮಯವಾಗಿದೆ.

ರಾಮನಾಥನಿಗೆ ಹೆಂಡತಿಯ ಕಾಗದ ಬರುತ್ತದೆ. ನೋಡಿದರೆ ಪ್ಯಾಕೆಟ್ ದಪ್ಪವಾಗಿದೆ. ತನ್ನ ಹೆಂಡತಿ ತನ್ನ ಪ್ರೀತಿಯ ಮಾತುಗಳಿಂದ ತುಂಬಿದ ಈ ಪ್ಯಾಕೆಟ್ ದಪ್ಪವಾಗಿದೆ ಎಂದು ತಿಳಿದ ಅವನಿಗೆ ಕೊನೆಯಲ್ಲಿ ಅದರಲ್ಲಿರುವ ಬರಿಯ ಹಾಳೆಗಳ ಜೊತೆಗೆ ಕೊನೆಯ ಹಾಳೆಯಲ್ಲಿ 'ನೀವು ಬರೆದ ಕೋಪದ ಕಾಗದ ತಲುಪಿತು. ಆದರೆ ಸಾಲದು ಕೋಪ! ಈ ದೊಡ್ಡ ಕಾಗದ ನೋಡಿದಾಗ ನಿಮಗೆ ಎಷ್ಟು ಸಿಟ್ಟು ಬಂತೋ? ಅದನ್ನು ತುಂಬಿ ದಯವಿಟ್ಟು ಇನ್ನೊಂದು ಕಾಗದ ದಯಪಾಲಿಸಬೇಕು!" ಇದರ ಅಂತ್ಯದಲ್ಲಿ ತಿಳಿಹಾಸ್ಯ ತುಂಬಿದ ಆನಂದರ ಬರೆದ ವೈಖರಿ ಓದುಗರಿಗೆ ಮೆಚ್ಚುಗೆಯಾಗಿರುವುದಕ್ಕೆ ಕಾರಣವಾಗಿದೆ. ಹಾಗೆಯೇ ಗೋಪಾಲಕೃಷ್ಣರಾಯರ ಕಥನಕೌಶಲ ಪಳಗಿಸಿಕೊಂಡವರು ಕನ್ನಡದಲ್ಲಿ ತುಂಬಾ ಕಡಿಮೆ. ಗೋಪಾಲಕೃಷ್ಣರಾಯರು ಸುಮಾರು ಅರವತ್ತಕ್ಕೂ ಮಿಕ್ಕಿ ಸಣ್ಣಕತೆಗಳನ್ನು ಬರೆದಿದ್ದಾರೆ. ಯಾವ ಕಥಾವಸ್ತುವನ್ನೇ ಅವರು ಅದನ್ನು ನಿರೂಪಿಸ ಹೊರಟರೆ ಅದು ಸಜೀವವಾಗಿ ಬಿಡುತ್ತದೆ.

ಇವರ ಕಥೆಗಳಲ್ಲಿ ಹಾಸ್ಯ ಸ್ಥಾಯಿಯಾಗಿ ಸಂಚರಿಸುತ್ತವೆ. ಅವರ ಹಾಸ್ಯದ ಝಳಕನ್ನು ಕಾಣಬೇಕಾದರೆ ಅವರ ಕಥೆಗಳಾದ 'ಜಟಕಾಸಾಬಿ' ಹಾಗೂ 'ಬಂಗಾರದ ಡಾಬು' ಮತ್ತು 'ಪತ್ರವಾಲೋಕನ' ಕತೆಗಳನ್ನು ಓದಿದಾಗ ವಿಧಿಯ ವಿಕೃತ ಹಾಸ್ಯದ ಜೊತೆಗೆ ಜೀವನದ ಆಂತರ್ಯವನ್ನು ಅರಿಯಬಹುದಾಗಿದೆ. ಇವರ ಹಾಸ್ಯ ಚುಚ್ಚುವುದಿಲ್ಲ, ಚುಂಬಿಸುತ್ತದೆ. ಶ್ರೀನಿವಾಸ, ಆನಂದ ಮತ್ತು ಗೋಪಾಲಕೃಷ್ಣರಾಯರನ್ನು ಅವಲೋಕಿಸಿ ಮುಂದೆ ಬಂದರೆ ಅ.ನ.ಕೃ ರವರ ಕತೆಗಳಲ್ಲಿ ಹೆಚ್ಚಾಗಿ ದುರಂತ

ಚಿತ್ರಗಳು ಬರುವುದರಿಂದ ಅಲ್ಲಿ ಹಾಸ್ಯ ಕಡಿಮೆ. ಆದರೆ ಕಾರಂತರು ಎಲ್ಲಿಯೂ ಏನು ಬರೆದರೂ ನಗೆಯನ್ನು ಮರೆಯ ತಕ್ಕವರಲ್ಲ. ಅವರ 'ಹಳ್ಳಿಯ ಹತ್ತು ಸಮಸ್ತರು' ನಮ್ಮನ್ನು ನಗಿಸುತ್ತಲೇ ತಮ್ಮ ಪರಿಚಯ ಮಾಡಿಕೊಡುತ್ತಾರೆ. ಹಾಸ್ಯದ ಲೇಖಕರು ಕಾಣದ ಹಾಸ್ಯದ ಪದರುಗಳು ಈ ಕೃತಿಯಲ್ಲಿ ಕಂಡು ಬರುತ್ತದೆ. ಅದಲ್ಲದೆ ಅವು ಅನೀರಿಕ್ಷಿತವಾಗಿ ಕಂಡು ಬರುವುದರಿಂದ ಹೆಚ್ಚು ಆನಂದ ನೀಡುತ್ತವೆ. ಕಾರಂತರ ಕಥೆಗಳಾದ 'ಮರಿಯಪ್ಪನಸಾಹಸ', 'ಗಜರಾಜ', 'ಮಂಗನಮದುವೆ', ಚನ್ನಕ್ಕನ ಪಾತ್ರ ಮತ್ತು 'ಮೈಗಳ್ಳನ ದಿನಚರಿ'ಗಳಲ್ಲಿ ಇವರು ಸುಶಿಕ್ಷಿತರ ಅಭಿರುಚಿಗೆ ತಕ್ಕಹಾಗೆ ಹಾಸ್ಯವನ್ನು ತಂದಿದ್ದಾರೆ.

ಕುವೆಂಪು ಅವರು ಸಣ್ಣ ಕತೆಗಳನ್ನು ಬರೆದಿದ್ದಾರೆಂದು ಹೇಳಿದರೆ ನಂಬದವರು ಉಂಟು. ಶ್ರೀರಾಮಾಯಣದರ್ಶನಂ ಮಹಾಕಾವ್ಯ ಬರೆಯುವುದಕ್ಕೆ ಮುಂಚೆ ಇವರು ಸಣ್ಣಕತೆಗಳನ್ನು ಬರೆದುದ್ದುಂಟು. ಕವಿತೆಯನ್ನು ಬರೆಯುವ ಕೈ ಕತೆಯನ್ನು ಅಷ್ಟೇ ಶಕ್ತಿಯುತವಾಗಿ ಬರೆಯಬಲ್ಲದೆಂಬುದಕ್ಕೆ ಕುವೆಂಪುರವರ ಸಾಹಿತ್ಯವೇ ಸಾಕ್ಷಿ. ಅವರು ರಚಿಸಿದ 'ಸನ್ಯಾಸಿ' ಮತ್ತು ಇತರ ಕತೆಗಳು'ಎಂಬ ಕಥಾಸಂಗ್ರಹವು ರಸವತ್ತಾಗಿದೆ. 'ಕ್ರಿಸ್ತನಲ್ಲದ ಪಾದ್ರಿಯಮಗಳು', 'ಈಶ್ವರನೂ ನಕ್ಕಿರಬೇಕು', 'ಆರಾಣೆಯ ಮೂರು ಕಾಸು', ಹೊಳಿಗೆ ಪ್ರತಿಜ್ಞೆ' ಮುಂತಾದ ಕಥೆಗಳು ಚಮತ್ಕಾರಭರಿತವಾಗಿರುವುದಲ್ಲದೆ ಹಾಸ್ಯಪೂರ್ಣವಾಗಿದೆ. ಈಶ್ವರನೂ ನಕ್ಕಿರಬೇಕು ಎಂಬ ಕಥೆಯಲ್ಲಿ ಮುಕ್ಕಗಂಡನಿಗೆ ಒಂದು ಮೊಳಹಂಡತಿಯನ್ನು ವಿಧಿಯೇ ಗಂಟು ಹಾಕಿಸುತ್ತದೆ. ಯಾರನ್ನು ಯಾರು ಮೋಸಗೊಳಿಸಿದರು ಎಂದು ಕೇಳಿದರೆ ಆ ಗಂಡಹೆಂಡಿರು ಮದುವೆಯಾದ ದಿನವೇ ಆ ರಾತ್ರಿ ಉತ್ತರ ಹೇಳುತ್ತಾರೆ. ಕಂತೆಗೆ ತಕ್ಕ ಬೊಂತೆ ಎಂಬ ಗಾದೆಯಂತೆ ಎಲ್ಲಾ ದೈವಲೀಲೆ. ಕಥೆಯನ್ನೋದಿದವರು ನಕ್ಕು ನಕ್ಕು ನಲಿಯದೆ ಗತಿಯಿಲ್ಲ. ಕುವೆಂಪು ಅವರು ತಮ್ಮ ಕವನ ಕಾದಂಬರಿಗಳಲ್ಲಿ ತಂದ ಶುದ್ಧಹಾಸ್ಯವನ್ನು ಕಥೆಗಳಲ್ಲೂ ತಂದದ್ದು ಗಮನಾರ್ಹವಾಗಿದೆ.

ಹಾಸ್ಯವನ್ನೇ ಮುಖ್ಯವಾಗಿ ಕಥೆಗಳಲ್ಲಿ ಬಳಸಿಕೊಂಡವರಲ್ಲಿ ಗೊರೂರು ಮೊದಲಿಗರು. ಅವರ 'ಶಿವರಾತ್ರಿಕಥಾಸಂಗ್ರಹ'ವನ್ನೋದಿದವರು ನಕ್ಕು ನಲಿಯುತ್ತಾರೆ. ಇವರ ಕಥೆಗಳಲ್ಲಿ ಪರರಿಗೆ ನೋವನ್ನು ಉಂಟು ಮಾಡದ ಸಾಹಿತ್ಯವು ತೆರೆ ತೆರೆಯಾಗಿ ಬರುತ್ತದೆ. ಅವರ 'ಹಾರುವಯ್ಯ ಕಥೆ'ಯನ್ನು ಓದಿದಾಗ ನಮಗೆ ಅವರು ಏನನ್ನೇ ಬರೆಯಲಿ ಹಾಸ್ಯವಿಲ್ಲದೇ ಬರೆಯುವುದೇ ಇಲ್ಲ ಎಂಬ ಮಾತು ಸತ್ಯವಾಗಿದೆ. ಆನಂದಕಂದರರದು ಹಾಸ್ಯಕಥೆಗಳನ್ನು ಬರೆಯುವಲ್ಲಿ ಪಳಗಿದ ಕೈ. ಅವರ 'ಮಾತಾಡುವ ಕಲ್ಲು', 'ಜನಪದ ಜೀವನ' ಮೊದಲಾದ ಕಥಾಸಂಗ್ರಹಗಳನ್ನು ಓದಿದಾಗ ಇವರು ನಿತ್ಯ ಜೀವನದ ಕಥಾವಸ್ತುಗಳನ್ನು ತೆಗೆದುಕೊಂಡು ಹಾಸ್ಯವನ್ನು ಅದರಲ್ಲಿ ಬಳಸಿರುವ ರೀತಿ ಅಮೋಘ. ನೈಜತೆ ನಗೆಗೆ ಮೂಲ ಎಂಬುದು ಇವರಿಂದ ತಿಳಿದುಬರುತ್ತದೆ. ನಂತರದಲ್ಲಿ ಬಂದ ಬಳ್ಳಾರಿ ಬೀಚಿಯವರು ಮತ್ತು ಪಡುಕೋಣೆ ರಮಾನಂದರಾಯರು ಉತ್ತಮ ಹಾಸ್ಯಕತೆಗಳನ್ನು ಬರೆದರು. ಕನ್ನಡ ಸಾಹಿತ್ಯದಲ್ಲಿ ಹಾಸ್ಯದ ಪ್ರಕಾರವನ್ನು ಕುರಿತು ಜಿ.ಪಿ.ರಾಜರತ್ನಂ ತಮ್ಮ 'ವಿಚಾರರಶ್ಮಿ' ಲೇಖನವೊಂದರಲ್ಲಿ ಹೀಗೆ ಹೇಳಿದ್ದಾರೆ.

"ಹಿಂದಿನ ಕಾಲದಲ್ಲಿ ನಮ್ಮ ಕನ್ನಡ ತಾಯಿ ನಕ್ಕಿದ್ದು ತುಂಬಾ ಕಡಿಮೆ. ಅಪರೂಪಕ್ಕೆ ಒಬ್ಬ ರತ್ನಾಕರ, ಒಬ್ಬ ಮುದ್ದಣ್ಣ ಸ್ವಾತಂತ್ರ್ಯವನ್ನು ವಹಿಸಿ ನಿಷ್ಠುರವಾಗಿ ನಕ್ಕಿದ್ದುಂಟು. ಈಗ ಕನ್ನಡಿಗರು ಬೆಳೆದಿದ್ದಾರೆ. ನಗೆ ಎಲ್ಲಿದೆಯೋ ಅಲ್ಲಿ ನಂದನ; ಎಂಬುದನ್ನು ಕಂಡುಕೊಂಡಿದ್ದಾರೆ. ನಕ್ಕು ನಗಿಸಲು ಬಲ್ಲವರು ನೂರಾರು ಲೇಖಕರರ ತಲೆ ಎತ್ತಿದ್ದಾರೆ. ಒಟ್ಟಿನಲ್ಲಿ ನಮ್ಮ ಜನರ ಹಾಸ್ಯ ಶೃಂಗದಿಂದ ಕನ್ನಡಕ್ಕೆ ಹೊಸ ಕೋಡು ಮೂಡಿದಂತಾಗಿದೆ"[5] ಮಾನವನ ಮಾನಸಿಕ ಅಸ್ವಸ್ಥತೆಯನ್ನು ಪರಿಹರಿಸುವ ದಿವ್ಯ ಔಷಧಿಗಳಲ್ಲಿ ಹಾಸ್ಯವು ಒಂದು. ಹಾಸ್ಯ ಮನೋಭಾವನೆಯನ್ನು ಸಹಜವಾಗಿ ಉಳ್ಳವರು ಕೊನೆಯ ಪಕ್ಷ ರಕ್ತದ ಒತ್ತಡವನ್ನಾದರೂ ಕಡಿಮೆ ಮಾಡಿಕೊಳ್ಳುತ್ತಾರೆ. ರಾಜರತ್ನಂಗೆ ಯಾವಗಲೂ ಇತರರೊಡನೆ ಹಂಚಿಕೊಳ್ಳುವ ಸಾಮಾಜಿಕ ಗುಣವಿದೆ. ಅವರ ಹಾಸ್ಯದ ಜೊತೆಯಲ್ಲಿ ನ ವ ಜನರ ಮುಖದ ಗಂಟು ಮಾಯವಾಗಿಸುತ್ತಾರೆ. ಹಾಗೆಯೇ ನಗುವಿನ ಬಗೆಗೆ ಬೀಚಿಯವರ ಮಾತು ಇಲ್ಲಿ ಉಲ್ಲೇಖನಿಯ "ಟೂತ್ ಬ್ರಷ್ ಒಂದಕ್ಕೆ ಮಾತ್ರ ಹಲ್ಲು ತೋರಿಸುವ ನಮ್ಮ ಕನ್ನಡ ಜನರಿಗೆ ಕಚಗುಳಿ ಇಡುವ ಸಾಹಸ ಮಾಡುವುದು ಮೂರ್ಖತನದ ಪರಾಮಾವಧಿಯಾಗುತ್ತದೆ. ಯಾಕೆಂದರೆ ಹಾಸ್ಯವನ್ನು ಸ್ವೀಕರಿಸುವ ಮನಸ್ಸು ಹೇಳುವವನಲ್ಲಿ, ಕೇಳುವವನಲ್ಲಿ ಸಮ ಪ್ರಮಾಣದಲ್ಲಿ ಇರಬೇಕು. ಇಲ್ಲದಿದ್ದಲ್ಲಿ ಅದು ಕುಂಬಳಕಾಯಿ ಕಳ್ಳನೆಂದರೆ ಹೆಗಲು ಮುಟ್ಟಿ ನೋಡಿಕೊಂಡಂತಾಗುತ್ತದೆ"[6] ಎಂದು ಹಾಸ್ಯದ ಅನರ್ಥಗಳ ಬಗ್ಗೆ ಹೇಳುತ್ತಾರೆ.

ಕನ್ನಡದ ಪ್ರಹಸನ ಪಿತಾಮಹಾ ತ್ಯಾಗರಾಜ ಪರಮಶಿವ ಕೈಲಾಸಂ ಅವರು ಹಾಸ್ಯ ಸಾಹಿತ್ಯದ ಬೆಳವಣಿಗೆಗೆ ಬುನಾದಿ ಹಾಕಿದವರು. ಇವರ ತಾವರೆಕೆರೆ ಗದ್ಯಗ್ರಂಥಗಳಲ್ಲಿ ಹಾಸ್ಯ ಓತಪ್ರೋತವಾಗಿ ಹರಿದಿದೆ. ಮುಖ್ಯವಾಗಿ ಪಾಶ್ಚಾತ್ಯ ಕವಿಗಳಿಂದ ಪ್ರೇರಣೆಗೊಳಗಾದ ಟಿ.ಪಿ.ಕೈಲಾಸಂ ರವರು ಸಮಾಜದ ಕುಂದುಕೊರತೆಗಳನ್ನು ಕತೆಯ ವಸ್ತುವನ್ನಾಗಿಸಿ ಅದಕ್ಕೆ ಹಾಸ್ಯದ ಶಾಲನ್ನು ಹೊದಿಸಿದರು. ಕೊರವಂಜಿ ಎಂಬ ಪತ್ರಿಕೆಯ ಮೂಲಕ ಅನೇಕ ಕಥೆಗಳನ್ನು ಹಾಸ್ಯ ಲೇಖನಗಳನ್ನು ರಾಶಿ ಎಂಬ ಹೆಸರಿನ ಮೂಲಕ ಬರೆದ ಡಾ.ಎಂ.ಶಿವರಾಂ ಬಹುಮುಖ ಪ್ರತಿಭೆಯುಳ್ಳವರಾಗಿದ್ದು ಕನ್ನಡದಲ್ಲಿ ಹಾಸ್ಯಪ್ರಕಾರವನ್ನು ಪುಷ್ಟವಾಗಿ ಬೆಳೆಸಿದ ಶ್ರೇಷ್ಠ ಮಾನವೀಯ ವೈದ್ಯರು. ಇವರು ಪರರ ಕುಂದುಕೊರತೆಗಳನ್ನು ತಮ್ಮ ಕಥೆಲೇಖನಗಳ ವಸ್ತುವನ್ನಾಗಿಸಿ ತಾವು ಬದುಕಿದ್ದ ಸಮಾಜದಲ್ಲಿ ಕಂಡ ಹುಳುಕುಗಳಿಗೆ ಕನ್ನಡಿ ಹಿಡಿದು ನಗೆ ಹೊಮ್ಮಿಸಿ ಆ ಮೂಲಕ ಸಮಾಜಸುಧಾರಣೆ ಮಾಡಿದರು.

ಹಾಸ್ಯದಲ್ಲಿ ಎದ್ದು ಕಾಣುವ ಒಂದು ಗುಣವೆಂದರೆ ಅದು ಮನಕ್ಕೆ ಚಕ್ಕುಲಿ ಇಟ್ಟು ನಗುಬುಕ್ಕೆ ಉಕ್ಕಿಸುವಂಥದ್ದು. ಮುಖ್ಯವಾಗಿ ಹಾಸ್ಯದ ಗುಣ ಮನೋರಂಜನೆ. ಉದ್ದೇಶ ಆನಂದವನ್ನುಂಟು ಮಾಡುವಂತಹದು. ಈ ದೃಷ್ಟಿಯಿಂದ ನೋಡಿದಾಗ ಬಲು ತೀಕ್ಷ್ಣ ಬುದ್ಧಿಯ ಪ್ರಖರತೆಯಿಂದ ಪ್ರಜ್ವಲಿಸುವ ಶ್ರೀರಂಗರ ಮೊನಚು ಮೊನಚಾದ ಹಾಸ್ಯ ವೈಖರಿ ಕಾಣಬಹುದು. ಶ್ರೀರಂಗರ ಹಾಸ್ಯದಲ್ಲಿ ಮನಕ್ಕೆ ಕಚಗುಳಿ ಇಡುವ ಸಾಮಾನ್ಯ ಹಾಸ್ಯದ ಕುಚೋದ್ಯಕ್ಕಿಂತ ಹೆಚ್ಚಾಗಿ ವ್ಯವಸ್ಥೆಯ ವಿರುದ್ಧ ಪಟ್ಟಭದ್ರ

ಹಿತಾಸಕ್ತಿಗಳ ವಿರುದ್ಧ ಅಸಹನೆಯಿಂದ ಸಿಡಿದೇಳುವ ಶ್ರೀರಂಗರ ಆಕ್ರೋಶವನ್ನು ಕಾಣಬಹುದು. ಉದಾ:- ಕುಸ್ತಿಗು ಕುಲಬೇಕು, ಜಾತೀಯತೆಗೆ ಒಂದೇ ಜಾತಿ, ಮುಂತಾದವುಗಳಲ್ಲಿ ನಾವು ಶ್ರೀರಂಗರ ಹಾಸ್ಯದ ವೈಖರಿಯನ್ನು ಕಾಣಬಹುದು. ಅವರ ಹಾಸ್ಯ ತಿಳಿನಗುವಿಗಿಂತ ಹೆಚ್ಚಾಗಿ ಮೆಚ್ಚುಗೆಯನ್ನು ಬೆರಗನ್ನು ಹುಟ್ಟಿಸುವಂತಹುದು. ಇವರ ನಂತರ ನಾವು ಎಚ್.ಕೆ.ರಂಗನಾಥ್‌ರವರ ಹಾಸ್ಯಕ್ಕೆ ನೀಡಿದ ಕೊಡುಗೆಯನ್ನು ನೋಡಿದರೆ ಇವರ ವೈದ್ಯನಲ್ಲದ ಡಾಕ್ಟರ್. ಇವರೆಲ್ಲಾ ನಮ್ಮವರೆ-ನೆನಪಿಗೆ ಸಾವಿಲ್ಲ ಎಂಬ ಕಥಾ ಲೇಖನಗಳಲ್ಲಿ ರಂಗನಾಥರ ಹಾಸ್ಯ, ಮೊನಚಾದ, ಕೊಂಕಿಲ್ಲದ, ಕುಚೋದ್ಯವಿಲ್ಲದ ತಿಳಿಹಾಸ್ಯ. ಹಾಸ್ಯಕ್ಕೊಳಗಾದವರೂ ಓದಿದಾಗ ಜೊತೆ ಸೇರಿ ಅನುಭವಿಸಬಹುದಾದ ಆತ್ಮೀಯತೆ ಅವರ ಹಾಸ್ಯ ವಿನೋದ ಲಹರಿಯ ವೈಶಿಷ್ಟ್ಯ. ಇನ್ನು ಹಾಸ್ಯವೆಂಬುದು ಗಾಯದ ಮೇಲಿನ ಮುಲಾಮ ಎಂದು ಹೇಳಿದ ಪಾ.ವೆಂ.ಆಚಾರ್ಯರು, ತಮ್ಮ ಹರಟೆಗಳಲ್ಲಿ ಹೆಚ್ಚು ಹಾಸ್ಯದ ಹೊನಲನ್ನು ಹರಿಸಿದವರು. ಇವರು ಲಾಂಗೂಲಾಚಾರ್ಯ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದವರು. ಅವರು ಎಷ್ಟು ಬಾರಿ ಅದರ ಬಹಳ ಗಂಭೀರವಾದ ವಿಚಾರಗಳನ್ನು ತಮ್ಮ ತಾತ್ವಿಕ ನಿಲುವುಗಳನ್ನು ಹಾಸ್ಯದ ಮೂಲಕ ಹಗುರಾಗಿ ತೇಲಿಸಿ ತಂದು ನಮಗೆ ತಲುಪಿಸುತ್ತಾರೆ. ಕನ್ನಡ ಹಾಸ್ಯ ಸಾಹಿತ್ಯವನ್ನು ಕುರಿತು ಅಥವಾ ಒಟ್ಟು ಕನ್ನಡ ಸಾಹಿತ್ಯವನ್ನು ಕುರಿತು ಹೇಳುವವರು ಶ್ರೀಮತಿ.ಟಿ.ಸುನಂದಮ್ಮನವರ ಹೆಸರನ್ನು ಹೇಳಲೇಬೇಕು. ಡಾ.ಶಿವರಾಂ ಅವರು ಪ್ರಾರಂಭಿಸಿದ ಹಾಸ್ಯ ಪತ್ರಿಕೆ ಕೊರವಂಜಿಯಲ್ಲಿ ತಮ್ಮ ಲೇಖನಗಳನ್ನು ಪ್ರಕಟಿಸಿ ಹಾಸ್ಯ ಸಾಹಿತಿ ಎಂದೇ ಪ್ರಸಿದ್ಧರಾದವರು. ಅವರು ಬಹುಮಟ್ಟಿಗೆ ಮಧ್ಯಮವರ್ಗದ ಕುಟುಂಬಗಳಲ್ಲಿ ನಡೆಯುವಂತಹ ವಿಷಯಗಳನ್ನೇ ಆಯ್ದು ಅದಕ್ಕೆ ಹಾಸ್ಯದ ಮೆರಗನ್ನು ಕೊಟ್ಟು ಕಥೆ ಬರೆದಂತವರು.

ಸುನಂದಮ್ಮನವರು ಬರೆಯಲು ಪ್ರಾರಂಭಿಸಿದ ಕಾಲದಲ್ಲಿ ಮಹಿಳೆಯರಲ್ಲಿರಲಿ ಪುರುಷರಲ್ಲೂ ಹಾಸ್ಯ ಸಾಹಿತ್ಯವನ್ನು ರಚಿಸುವವರು ಹೆಚ್ಚು ಮಂದಿ ಇರಲಿಲ್ಲ. ಹರಿಕಥೆ, ಪುರಾಣಗಳಲ್ಲಿ ಮಧ್ಯೆ ವಿನೋದ ಕತೆಗಳನ್ನು ಹೇಳುತ್ತಿದ್ದರು. ನಾಟಕ ಚಲನಚಿತ್ರಗಳಲ್ಲಿ ಹಾಸ್ಯ ಸನ್ನಿವೇಶಗಳಿರುತ್ತಿದ್ದವು. ರಾಜಮಹಾರಾಜರ ಆಸ್ಥಾನಗಳಲ್ಲಿ ವಿದೂಷಕರಿದ್ದು ಅವರ ಕಥೆಗಳು ಪ್ರಚಾರದಲ್ಲಿರುತ್ತಿದ್ದವು. ಆದರೆ ಹಾಸ್ಯ ಸಾಹಿತ್ಯ ಈಗಿನಷ್ಟು ಸಮೃದ್ಧವಾಗಿ ಬೆಳೆದಿರಲಿಲ್ಲ. ಸುನಂದಮ್ಮನವರು ಕರ್ನಾಟಕದ ಆಚೆಯೇ ಮುಂಬಯಿ, ಚೆನ್ನೈ, ನೈನಿಟಾಲ್ ಮುಂತಾದ ಕಡೆ ಸಾಹಿತ್ಯ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು. ಆಗ ಸಭೆಯಲ್ಲಿ ಅವರನ್ನು ಪರಿಚಯ ಮಾಡಿಕೊಡುವಾಗ ಕನ್ನಡದ ಹಾಸ್ಯಸಾಹಿತಿ ಎಂದು ಹೇಳಿದರೆ ಜನರು ಆಶ್ಚರ್ಯಪಡುವಷ್ಟರ ಮಟ್ಟಿಗೆ ಹಾಸ್ಯಸಾಹಿತ್ಯ ಕನ್ನಡದಲ್ಲಿ ಬೆಳೆದಿತ್ತು ಎನ್ನಬಹುದು.

ಬಿ.ಜಿ.ಎಲ್. ಸ್ವಾಮಿಯವರು ಸಾಹಿತಿಯಾಗಿ ಕನ್ನಡ ನಾಡಿನ ಜನತೆಗೆ ಸುಪರಿಚಿತರು. ಇವರು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಅವರ ಕೃತಿಗಳ ಅಧ್ಯಯನವೆಂದರೆ ಹಾಸ್ಯದ ಸಿಹಿಲೇಪ ಹೊಂದಿದ್ದ ಜ್ಞಾನಫಲವನ್ನು ಸವಿದಂತೆಯೇ ಎಂಬುದು ವಿದ್ವಾಂಸರ ಅಭಿಮತ. ಅವರ 'ಅಮೇರಿಕಾದಲ್ಲಿ ನಾನು' ಸ್ವಾಮಿಯವರ ಪ್ರವಾಸ ಕಥನ. ಉನ್ನತ ಅಧ್ಯಯನಕ್ಕಾಗಿ ೧೯೫೦ರಲ್ಲಿ

ಬಾಸ್ಟನ್ನಿನ ಹಾರ್ವಾರ್ಡ್ ವಿಶ್ವವಿದ್ಯಾಲಯ ಸೇರಿದರು. ಆ ಸಂದರ್ಭದಲ್ಲಿ ಅವರು ತಮ್ಮ ಅನುಭವಗಳನ್ನು ಬಹುಸ್ವಾರಸ್ಯವಾಗಿ ಈ ಕೃತಿಯಲ್ಲಿ ನಿರೂಪಿಸಿದ್ದಾರೆ. ಸ್ವಾಮಿಯವರ ಕೃತಿಗಳಲ್ಲಿ ಹೆಜ್ಜೆ ಹೆಜ್ಜೆಗೂ ಲಘುಹಾಸ್ಯ, ವಿಡಂಬನೆ, ವ್ಯಂಗ್ಯ ಕಂಡುಬರುತ್ತದೆ. ಹಾಸ್ಯಪ್ರಸಂಗಗಳು ಸಾಂದರ್ಭಿಕವಾಗಿ ಬರುವುದರಿಂದ ಆ ಸಂದರ್ಭ ಸನ್ನಿವೇಶದಲ್ಲಿ ಅವು ಅತ್ಯುತ್ತಮ ಎನಿಸುತ್ತವೆ.

ಹೀಗೆ ನಮ್ಮ ಆಧುನಿಕ ಕನ್ನಡ ಕಥೆಗಳಲ್ಲಿ ಹಾಸ್ಯ ಎಂಬುದು ಸಾಹಿತಿಗಳ ತೀಕ್ಷ್ಣತೆಗೆ, ಭಾಷೆಗೆ ಕಥನಕೌಶಲ್ಯಕ್ಕೆ ಒಳಪಟ್ಟು ತನ್ನದೇ ಆದ ಛಾಪನ್ನು ಮೂಡಿಸಿ ಕನ್ನಡ ಸಾಹಿತ್ಯದ ಉತ್ಕೃಷ್ಟತೆಗೆ, ಸಮೃದ್ಧಿಗೆ ಸಹಾಯಕವಾಗಿದೆ. ಕನ್ನಡ ಹಾಸ್ಯ ಸಾಹಿತ್ಯ ಸಂವಾದದಲ್ಲಿ ತೇಜಸ್ವಿಯವರ ಪಾತ್ರವು ಇದೆ.

## ಅಡಿ ಟಿಪ್ಪಣಿ

೧. ದೇವುಡು : ಕರ್ನಾಟಕ ಸಂಸ್ಕೃತಿ, ಪುಟ–೯೬

೨. ಜಿ.ಪಿ.ರಾಜರತ್ನಂ : ವಿಚಾರರಶ್ಮಿ, ಪುಟ–೨

೩. ಬಿ.ಎಸ್.ಕೇಶವರಾವ್, ಬೀ.chi–ಪುಟ–೩೯

# ಅಧ್ಯಾಯ – ೩

## ತೇಜಸ್ವಿಯವರ ಜೀವನ ಮತ್ತು ಕೃತಿಗಳು

ಸುಂದರಗಿರಿವನಗಳಿಂದೊಡಗೂಡಿದ ಮಲೆನಾಡಿನ ಸಹ್ಯಾದ್ರಿ ಶ್ರೇಣಿಯಲ್ಲಿರುವ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳ್ಳಿ ಎಂಬ ಗ್ರಾಮವೊಂದಿದೆ. ಅದು ತೇಜಸ್ವಿಯವರ ಹುಟ್ಟೂರು. ಕನ್ನಡ ಸಾಹಿತ್ಯಲೋಕದ ದಿಗ್ಗಜರಾದ ಕುವೆಂಪು ಕರ್ನಾಟಕಕ್ಕೆ ತಮ್ಮ ಅತ್ಯಮೂಲ್ಯ ಸಾಹಿತ್ಯ ಕೃತಿಗಳ ಮೂಲಕ ಅಪಾರ ಕೀರ್ತಿ ತಂದುಕೊಟ್ಟು ರಾಷ್ಟ್ರಕವಿ ಎಂದೇ ಪ್ರಖ್ಯಾತರಾಗಿದ್ದವರು. ಇಂತಹ ಸಾಹಿತ್ಯರತ್ನದ ಹುಟ್ಟೂರಾದ ಕುಪ್ಪಳ್ಳಿಯಲ್ಲಿ ೧೯೩೮ರ ಸೆಪ್ಟೆಂಬರ್ ೮ ರಂದು ಕುವೆಂಪು ಮತ್ತು ಹೇಮಾವತಿಯವರ ಹಿರಿಯ ಮಗನಾಗಿ ತೇಜಸ್ವಿಯವರು ಜನಿಸಿದರು. "ಕನ್ನಡ ಸಾರಸತ್ವ ಲೋಕದ ಅಪೂರ್ವ ಪ್ರತಿಭೆ ಉದಯಿಸಿದ ದಿನ ಅದು. ಸಹ್ಯಾದ್ರಿ ಪರಿಸರದಲ್ಲಿ ಮತ್ತೊರ್ವ ಪ್ರತಿಭಾವಂತನನ್ನು ಕಾಣುವಂತಾದದ್ದು ನಾಡಿನ ಭಾಗ್ಯ"[1]

ಕುವೆಂಪುರವರು ತಮ್ಮ ಮಕ್ಕಳಿಗೆ ಇಟ್ಟ ಹೆಸರುಗಳು ಆಕರ್ಷಕ. ಹಿರಿಯ ಮಗ ಪೂರ್ಣಚಂದ್ರತೇಜಸ್ವಿ, ಕಿರಿಯ ಮಗ ಕೋಕಿಲೋದಯಚೈತ್ರ, ಹೆಣ್ಣುಮಕ್ಕಳು ತಾರಿಣಿ ಹಾಗೂ ಕಲಾ. ಕುವೆಂಪು ತೇಜಸ್ವಿಯವರು ಹುಟ್ಟುವ ವೇಳೆಗಾಗಲೇ 'ಕಾನೂರು ಹೆಗ್ಗಡತಿ' ಕಾದಂಬರಿ ಬರೆದಾಗಿತ್ತು. ೧೯೩೩ರಲ್ಲಿಯೇ ಹುಬ್ಬಳ್ಳಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಅಧ್ಯಕ್ಷರಾಗಿದ್ದರು. ಮೈಸೂರಿನಲ್ಲೇ ವಾಸವಾಗಿದ್ದು ಅಲ್ಲೇ ಕನ್ನಡ ಅಧ್ಯಾಪಕರಾಗಿದ್ದು ಕಾರ್ಯನಿರ್ವಹಿಸುತ್ತಿದ್ದರು. ೧೯೩೯ರಲ್ಲಿ ಕನ್ನಡ ಉಪಪ್ರಾಧ್ಯಾಪಕರಾಗಿ ಬಡ್ತಿ ಪಡೆದರು. ತೇಜಸ್ವಿಯವರ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ತಂದೆ ವಾಸವಾಗಿದ್ದ ಮೈಸೂರಿನ ಒಂಟಿಕೊಪ್ಪಲಿನ ಶಾಲೆಯೊಂದರಲ್ಲಿ ನಡೆಯಿತು. ಅವರು ಸ್ಕೂಲಿಗೆ ಹೋಗಲು ಮೊದಲಿನಿಂದಲೂ ಇಷ್ಟಪಡದೇ ಇದ್ದದ್ದನ್ನು ತಮ್ಮ 'ಅಣ್ಣನ ನೆನಪು' ಕೃತಿಯಲ್ಲಿ ಹೀಗೆ ಹೇಳುತ್ತಾರೆ. "ಸ್ಕೂಲಿಗೆ ಹೋಗಲು ನಮಗೆ ಸುತರಾಂ ಇಷ್ಟವಿರಲಿಲ್ಲ. ಆಗೆಲ್ಲ ಈಗಿನಂತೆ ಶಿಶುವಿಹಾರಗಳಿರಲಿಲ್ಲ. ಒಂಟಿಕೊಪ್ಪಲು ಅಂತು ವಿದ್ಯಾಭ್ಯಾಸದ ದೃಷ್ಟಿಯಿಂದ ತುಂಬ ಹಿಂದುಳಿದಿತ್ತು. ಆದ್ದರಿಂದ ನಮಗೆ ಶಿಶುವಿಹಾರಕ್ಕೆ ಹೋಗೆ ಗೊತ್ತಿಲ್ಲ. ನಾವು ಸ್ಕೂಲಿಗೆ ಸೇರುವಷ್ಟು ದೊಡ್ಡವರಾಗುವವರೆಗೂ ಮನೆಯಲ್ಲೇ ಆಡಿಕೊಂಡಿದ್ದೇವು. ಶಾಲೆಗೆ ಹೋಗುವ ಪರಿಪಾಟ ಚೂರು ಇರಲಿಲ್ಲ"[2] ಎಂದು ಹೇಳುವ ತೇಜಸ್ವಿಯವರು ಎಸ್.ಎಸ್.ಎಲ್.ಸಿ ಪಾಸು ಮಾಡಲು ಅನೇಕ ಕಾರಣಗಳಿಂದ ಮೂರು ವರ್ಷ ತೆಗೆದುಕೊಂಡರು. ಹಾಗೆಯೇ ಶಿವಮೊಗ್ಗದಲ್ಲಿ ಇಂಟರ್ ಮಿಡಿಯೆಟ್ ಮಾಡಿಕೊಂಡರು. ಆದರೆ ಜೂನಿಯರ್ ಇಂಟರ್ ಓದುತ್ತಿರುವಾಗಲೇ ಅವರಿಗೆ ತೊಡಕಾದದ್ದು ಇಂಗ್ಲೀಷ್ ಮತ್ತು ಗಣಿತ. ಇದರಿಂದ ಲಾಭವಾದದ್ದು ಕನ್ನಡಕ್ಕೆ, ಕನ್ನಡ ಸಾಹಿತ್ಯಕ್ಕೆ. ಅವರೇ ಹೇಳಿಕೊಂಡಿರುವಂತೆ

ಅವರು ಅನೇಕ ಸಾರಿ ಫೇಲಾದದ್ದು ಇಂಗ್ಲೀಷಿನಲ್ಲಿ "ನನಗೆ ಮೊದಲಿನಿಂದಲೂ ಗಣಿತ ಮತ್ತು ಇಂಗ್ಲೀಷ್ ಕೊಟ್ಟಿರುವ ತೊಂದರೆ ಅಷ್ಟಿಷ್ಟಲ್ಲ. ನನಗೆ ಈಗಲೂ ಇಂಗ್ಲೀಷಿನಲ್ಲಿ ಓದುವುದು, ಮಾತನಾಡುವುದು ಎಲ್ಲ ಸುಲಭ ಸಾಧ್ಯವಿದ್ದರೂ ಅದೊಂದು ಕನ್ನಡದ ವಿಸ್ತರಣೆಯಂತಾದಾಗ ಮಾತ್ರವೇ ಹೊರತು ಇಂಗ್ಲೀಷ್ ಭಾಷೆ ಎಂದು ಪ್ರತ್ಯೇಕವಾಗಿ ಪರಿಗಣಿಸಿದ ಕೂಡಲೇ ಸಾಧ್ಯವಾಗುವುದೇ ಇಲ್ಲ. ಇಂಗ್ಲೀಷ್ ಕನ್ನಡದ ವಿಸ್ತರಣೆಯಂತಾಗಿ ನನ್ನ ಅಭಿಪ್ರಾಯಗಳನ್ನು ಇತರರಿಗೆ ತಿಳಿಸುವಷ್ಟೇ ಮುಖ್ಯವಾದಾಗ ಇಂಗ್ಲೀಷ್ ನನಗೆ ಅಷ್ಟು ತೊಂದರೆ ಕೊಡುವುದಿಲ್ಲ."[೩] ಎಂದಿದ್ದಾರೆ.

ಕುವೆಂಪುರವರು ಮೊದಲು ಇಂಗ್ಲೀಷ್‌ನಲ್ಲಿ ಸಾಹಿತ್ಯ ರಚನೆ ಮಾಡಿದರಾದರೂ ಕವಿ ಜೇಮ್ಸ್ ಕಸಿನ್ಸ್‌ರವರ ಮಾತುಗಳಿಂದ ಪ್ರಭಾವಿತರಾಗಿ ಮಾತೃಭಾಷೆಯಲ್ಲಿ ಸಾಹಿತ್ಯ ರಚನೆ ಮಾಡಿದರು. ಅವರು ಕಡ್ಡಾಯ ಇಂಗ್ಲೀಷ್ ವಿರುದ್ಧವೇ ಇದ್ದರು. ತೇಜಸ್ವಿಯವರು ಜೂನಿಯರ್ ಇಂಟರ್‌ನಲ್ಲಿ ತೇರ್ಗಡೆಯಾಗದಿರಲು ಕಾಟಕೊಟ್ಟ ಮತ್ತೊಂದು ವಿಷಯ ಗಣಿತ. ಗಣಿತದಲ್ಲಿ ಹೆಚ್ಚು ಅಂಕಗಳನ್ನು ತೆಗೆದುಕೊಳ್ಳಲು ಸಾಧ್ಯವಾಗದ ಕಾರಣ ವಿಜ್ಞಾನದಿಂದ ಆರ್ಟ್ಸ್‌ಗೆ ಬದಲಾಯಿಸಿಕೊಂಡು ಕನ್ನಡ ಬಿ.ಎ.ಆನರ್ಸ್ ಓದಿದರು. ಬಿ.ಎ.ಗೆ ಓದುವಾಗ ಪಠ್ಯಪುಸ್ತಕವಾಗಿ ಷೇಕ್ಸ್‌ಪಿಯರ್‌ನ 'ಹ್ಯಾಮ್ಲೆಟ್' ಇದ್ದಿತು. ತೇಜಸ್ವಿಯವರು ಹ್ಯಾಮ್ಲೆಟ್ ಕುರಿತಂತೆ 'ಇಂಗ್ಲೀಷ್ ಸಾಹಿತ್ಯದಲ್ಲಿ ಲಭ್ಯವಿದ್ದ ಎಲ್ಲ ಉದ್ಗ್ರಂಥಗಳನ್ನು ಓದಿ ನೋಟ್ಸ್ ಮಾಡಿಕೊಂಡರು. ಆದರೆ ಕೇವಲ ಬಿ.ಎ.ಪರೀಕ್ಷೆಗೆ ಅಷ್ಟೊಂದು ಓದುವ ಅವಶ್ಯಕತೆಯೂ ಇರಲಿಲ್ಲ. ಇದನ್ನು ಗಮನಿಸಿದ ಕುವೆಂಪುರವರು 'ಸುಮ್ಮನೆ ತಿಳಿದುಕೊಂಡು ತಪ್ಪಿಲ್ಲದೆ ಇಂಗ್ಲೀಷ್‌ನಲ್ಲಿ ಅವರು ಕೇಳಿದ್ದಕ್ಕೆ ಉತ್ತರ ಬರೆದು ಬಾ' ಎಂದು ತಿಳುವಳಿಕೆ ನೀಡಿದರು. ಹಾಗೆಯೇ ಊಹಿಸಿದ ಪ್ರಶ್ನೆಗಳೇ ಬಂದಿದ್ದರಿಂದ ತೇಜಸ್ವಿ ಎಲ್ಲದ್ದಕ್ಕೂ ಉತ್ತರಿಸಿ ಬಂದಿದ್ದರು. ಆದರೂ ಇಂಗ್ಲೀಷ್‌ನಲ್ಲಿ ಫೇಲಾಗಿದ್ದರು. ಆಗಾಗಿ ತೇಜಸ್ವಿಯವರಿಗೆ ಇಂಗ್ಲೀಷ್ ಗಗನಕುಸುಮವಾಗಿ ಬಿಟ್ಟಿತ್ತು. ಈ ಎಲ್ಲಾ ಜಂಜಾಟ ಮಧ್ಯೆ ಬಿ.ಎ.ದಾಟಿದರು. ಕನ್ನಡದಲ್ಲಿ ಬಿ.ಎ.ಆನರ್ಸ್ ಮಾಡಿಕೊಂಡು ಪದವಿಧರರಾದರು. ಬಿ.ಎ.ಆದೊಡನೆ ಕನ್ನಡ ಎಂ.ಎ. ಮಾಡಿಕೊಳ್ಳಲು ಮೈಸೂರು ಮಹಾರಾಜಕಾಲೇಜು ಸೇರಿದರು. ಇಲ್ಲಿ ಅವರೊಂದಿಗಿದ್ದ ಮುಖ್ಯ ಗೆಳೆಯರು ಎಂದರೆ ಕಡಿದಾಳ್ ಶಾಮಣ್ಣ, ಮಲೆನಾಡು ಶ್ರೀನಿವಾಸ್, ಭದ್ರಾವತಿ ಸುಂದರೇಶ್, ಸಿ.ಪಿ.ಕೆ(ಸಿ.ಪಿ.ಕೃಷ್ಣಕುಮಾರ್)ಮತ್ತಿತರರು. ಸಿ.ಪಿ.ಕೆಯವರು ಬಿ.ಎ. ಇದ್ದಾಗಲೇ ಗೆಳೆಯರು. ಹಾಗೆ ನೋಡಿದರೆ ಕೃಷ್ಣಕುಮಾರ್ ತಾವೇ ಹೇಳಿಕೊಂಡಿರುವಂತೆ ಅವರಿಗೆ ಮೈಸೂರಿನಲ್ಲಿ ಶಿಕ್ಷಣ ಪಡೆಯಲು ಬೇಕಾದ ವ್ಯವಸ್ಥೆಯನ್ನು ಮಾಡಿಕೊಟ್ಟವರು ತೇಜಸ್ವಿ

೧೯೬೧ರಲ್ಲಿ ಕನ್ನಡದಲ್ಲಿ ಎಂ.ಎ. ಪದವಿ ಪಡೆದ ನಂತರ ತೇಜಸ್ವಿಯವರನ್ನು ತನ್ನಂತೆಯೆ ಕನ್ನಡ ಅಧ್ಯಾಪಕನನ್ನಾಗಿ ಮಾಡಬೇಕೆಂದು ಕೊಂಡಿದ್ದ ಕುವೆಂಪುರವರ ಆಸೆ ಕೊನೆಗೂ ಈಡೇರಲೇ ಇಲ್ಲ. ಸ್ನಾತಕೋತ್ತರ ಪದವಿ ಪಡೆದ ತೇಜಸ್ವಿ ಉಪನ್ಯಾಸಕರಾಗದೇ ಕಡಿದಾಳ್ ಶಾಮಣ್ಣನವರ ಜೊತೆ ನೃಪತುಂಗ ಎಂಬ ಮುದ್ರಣಾಲಯವನ್ನು ಆರಂಭಿಸಿದರಾದರೂ ಕೆಲವೇ ದಿನ ಕೆಲಸ ಮಾಡಿದ ಅವರಿಗೆ

ಅದು ಬೇಡವೆನ್ನಿಸಿತು. ೧೯೬೧ರಲ್ಲೇ ತೇಜಸ್ವಿಯವರು ಪ್ರಾಧ್ಯಾಪಗಿರಿ ಎಂಬ ಸಾಂಸ್ಥಿಕ ಚೌಕಟ್ಟಿನಲ್ಲಿ ಇರಲು ಇಷ್ಟಪಡದೇ ಸ್ವತಂತ್ರರಾಗಿಯೇ ಒಬ್ಬ ಕೃಷಿಕರಾಗಲು ಅಪೇಕ್ಷಿಸಿದರು. ಆದರೆ ಮಾಡಿದ್ದು ಎರಡು ಬಗೆಯ ಕೃಷಿ ಒಂದು, ಸಾಹಿತ್ಯಕೃಷಿ ಎರಡನೇಯದು ತೋಟಗಾರಿಕೆಯ ಕೃಷಿ. ಮೂಡಿಗೆರೆ ಚಿಕ್ಕಮಗಳೂರು ಜಿಲ್ಲೆಯ ತಾಲ್ಲೂಕು ಕೇಂದ್ರ ಇಲ್ಲಿಗೆ ಸಮೀಪದ ಜನ್ನಾಪುರದಲ್ಲಿ ೧೯೬೧ರಲ್ಲಿ ಒಂದು ತೋಟ ಖರೀದಿಸಿ ತೇಜಸ್ವಿಯವರು ಅದಕ್ಕೆ 'ಚಿತ್ರಕೂಟ' ಎಂದು ಹೆಸರಿಟ್ಟರು. ಅನಂತರ ಆ ತೋಟದ ಕೃಷಿಯ ಜೊತೆಗೆ ಸಾಹಿತ್ಯಕೃಷಿಯೂ ಕೂಡ ಅವರ ಚಿಂತನೆ ಅನುಭವಗಳ ಹಿನ್ನೆಲೆಯಲ್ಲಿ ಸಮೃದ್ಧವಾಗಿ ಬೆಳೆಯಿತು. ಕೃಷಿ ಬದುಕೇ ಅವರ ಪ್ರಯೋಗಶೀಲತೆಗೆ ಕಾರಣವಾಗಿದೆ. ಕೃಷಿಕರಾದ್ದರಿಂದಲೇ ಅವರ ಸಾಹಿತ್ಯದಲ್ಲಿ ಕೃಷಿಗೆ ಸಂಬಂಧಿಸಿದ ಅನೇಕ ವಿವರಗಳು ಕಂಡುಬರುತ್ತದೆ. ಕಾಫಿ ಬೆಳೆ, ಜೇನುಬೇಸಾಯ, ಏಲಕ್ಕಿ ಬೆಳೆ, ಬೆಳೆಗಳಿಗೆ ಬರುವಂತಹ ರೋಗಗಳು, ಅವುಗಳಿಗೆ ನೀಡುವಂತಹ ಔಷಧಿಗಳ ವಿವರಗಳು ಅವರ ಸಾಹಿತ್ಯದಲ್ಲಿ ಪದೇ ಪದೇ ಕಂಡುಬರುತ್ತವೆ. ವಿನಾಶದ ಅಂಚಿನಲ್ಲಿರುವ ಕಾಡು, ಹದಗೆಡುತ್ತಿರುವ ಪರಿಸರ ಅದಕ್ಕೆ ಕಾರಣವಾಗಿರುವ ವ್ಯಕ್ತಿಗಳು–ಈ ಎಲ್ಲ ಸಂಗತಿಗಳನ್ನು ತೇಜಸ್ವಿಯವರು ತಮ್ಮ ಕೃತಿಗಳಲ್ಲಿ ಚಿತ್ರಿಸುತ್ತಾರೆ.

೧೯೬೬ರಲ್ಲಿ ಆರ್.ರಂಗಪ್ಪ ಎಂಬುವವರು ಪುತ್ರಿ ಆರ್.ರಾಜೇಶ್ವರಿಯವರನ್ನು ಕುವೆಂಪುರವರು ಪ್ರಚಾರಕ್ಕೆ ತಂದ 'ಮಂತ್ರಮಾಂಗಲ್ಯ'ಪದ್ಧತಿಯ ಮೂಲಕ ವಿವಾಹವಾದರು. ಮಂತ್ರಮಾಂಗಲ್ಯದ ಪದ್ಧತಿಯ ಬಗ್ಗೆ ಅವರು ತಮ್ಮ 'ಅಣ್ಣನನೆನಪು' ಕೃತಿಯಲ್ಲಿ ಹೀಗೆ ಹೇಳುತ್ತಾರೆ. "ನಮ್ಮೆಲ್ಲ ಯುವಕ–ಯುವತಿಯರು ತಮ್ಮ ತತ್ವಾದರ್ಶಗಳಿಗೆ ತಿಲಾಂಜಲಿಯಿತ್ತು ಅಂತಿಮವಾಗಿ ಗೊಡ್ಡು ಕಂದಾಚಾರಗಳಿಗೂ ಸನಾತನ ಸಂಪ್ರದಾಯಗಳಿಗೂ ಶರಣಾಗುವುದು ವಿವಾಹದ ಸಂದರ್ಭದಲ್ಲಿಯೇ ಎಂಬುದನ್ನು ಅಣ್ಣ ಚೆನ್ನಾಗಿ ತಿಳಿದಿದ್ದರು. ಆದ್ದರಿಂದಲೇ ಅವರು ೭೦ರ ದಶಕದಲ್ಲಿ ಯುವ ಸಮುದಾಯಕ್ಕೆ ನೀವು ಲೋಕವನ್ನಾಗಲಿ, ಸಮಾಜವನ್ನಾಗಲಿ, ಪುರೋಹಿತಶಾಹಿಯನ್ನಾಗಲಿ ಬದಲಾಯಿಸಲು ಪ್ರಯತ್ನಿಸುವ ಅಗತ್ಯ ಖಂಡಿತ ಇಲ್ಲ. ನೀವು ಮತ್ತು ನಿಮ್ಮ ಮನಸ್ಸು ಪರಿವರ್ತನೆಯಾಗದ ಹೊರತು ಏನೂ ಬದಲಾಗುವುದಿಲ್ಲ. ನಿಮ್ಮಲ್ಲಿ ಪ್ರಾಮಾಣಿಕತೆ ಏನಾದರೂ ಇದ್ದರೆ ನಾನು ಹೇಳುವ ಒಂದು ಸಣ್ಣ ಸುಧಾರಣೆ ನಿಮ್ಮ ಜೀವನದಲ್ಲಿ ಮಾಡಿಕೊಳ್ಳಿ. ನಿಮ್ಮ ಮದುವೆಯನ್ನು ನೀವು ವರದಕ್ಷಿಣೆ ತೆಗೆದುಕೊಳ್ಳದೇ ಶಾಸ್ತ್ರಾಚರಗಳಿಗೆ ಕಟ್ಟುಬೀಳದೆ ನಿಮ್ಮ ಅಂತಸ್ತಿನ ಪ್ರದರ್ಶನ ಮಾಡಲು ದುಂದು ಮಾಡದೆ ಸರಳವಾಗಿ ಮದುವೆ ಮಾಡಿಕೊಳ್ಳಿ" "ಅಣ್ಣ ತಮ್ಮ ಧ್ಯೇಯ ಧೋರಣೆಗಳನ್ನು ಎಷ್ಟೊಂದು ಗಾಢವಾಗಿ ನಂಬಿದ್ದರೆಂದರೆ ಅವರು ಯಾವತ್ತು ಅದ್ದೂರಿಯ ಸಂಪ್ರದಾಯಿಕ ವಿವಾಹಗಳಿಗೆ ಹೋಗಲಿಲ್ಲ. ಅಣ್ಣ ಮಾಡಿದ ಮೊಟ್ಟಮೊದಲ ಸರಳವಿವಾಹ ಎಂದರೆ ನನ್ನದೇ"[1] ಪರಂಪರೆಗಳಿಗೆ ವಿರೋಧವಾದರೂ ತಾವೊಲಿದ ಹೆಣ್ಣನ್ನೇ ತಾವಿಷ್ಟಪಟ್ಟ ರೀತಿಯಲ್ಲೆ ಮದುವೆಯಾದ ತೇಜಸ್ವಿಯವರು. ೧೯೭೭ರ ವರೆಗೆ ಚಿತ್ರಕೂಟದಲ್ಲಿಯೇ ಇದ್ದರು. ಅವರಿಗೆ ಇಬ್ಬರು ಹೆಣ್ಣುಮಕ್ಕಳು ಆದವು. ಮೊದಲನೇಯ

ಮಗಳು ಸುಶ್ಮಿತಾ, ಎರಡನೆ ಮಗಳು ಈಶಾನ್ಯೆ. ೧೯೭೭ರಲ್ಲಿ 'ಚಿತ್ರಕೂಟ'ಮಾರಾಟ ಮಾಡಿ ನಿಂಬೆ ಮೂಲೆಯಲ್ಲಿ ೧೯೭೮ರಲ್ಲಿ ಸುಮಾರು ೨೫ ಎಕರೆ ಜಮೀನು ಖರೀದಿಸಿ ಅದಕ್ಕೆ 'ನಿರುತ್ತರ' ಎಂದು ಹೆಸರಿಟ್ಟು ತೋಟ ಮಾಡಿದರು. ಒಂದು ವರದಿಯಂತೆ ಕೃಷಿಯಲ್ಲಿ ತಕ್ಷಣ ಪ್ರತಿಫಲ ದೊರೆಯದಿರುವ ಹಿನ್ನೆಲೆಯಲ್ಲಿ ತೋಟಕ್ಕೆ ಆ ಹೆಸರನ್ನಿಟ್ಟಿದ್ದರು. 'ನಿರುತ್ತರ' ಪಟ್ಟಣದಿಂದ ಒಂದೂವರೆ ಕಿ.ಮಿ.ದೂರದಲ್ಲಿದೆ. ಹೀಗಾಗಿ ಮೂಡಿಗೆರೆಗೂ ಅವರಿಗೂ ಅಪಾರ ನಂಟು ಬೆಸೆದಿತ್ತು.

ಮೂಡಿಗೆರೆಯಲ್ಲಿ ಬೇಸಾಯಕ್ಕೆ ನಿಂತ ತೇಜಸ್ವಿಯವರು ಮಾಡದ ಕೆಲಸ ಯಾವುದೂ ಇಲ್ಲ. ಪೋಟೋಗ್ರಫಿ ಕಲಿತರು ಪೋಟೋಗ್ರಫಿ ಕೆಲಸ ತುಂಬಾ ಕಷ್ಟ ಎಂದು ಹೇಳುವಾಗ ತಮ್ಮ ಪರಿಸರದ ಕತೆಗಳಲ್ಲಿ ಒಂದಾದ 'ಸುಸ್ಮಿತ ಮತ್ತು ಹಕ್ಕಿಮರಿ' ಕತೆಯ ಪ್ರಾರಂಭದಲ್ಲಿ ಹೀಗೆ ಹೇಳಿದ್ದಾರೆ. "ಹಕ್ಕಿಗಳ ಪೋಟೋಗಳನ್ನು ನಾನು . ಮೊದಲು ಪುಸ್ತಕಗಳಲ್ಲಿ ನಿಯಕಾಲಿಕಗಳಲ್ಲಿ ನೋಡಿದಾಗ ಅವುಗಳ ಅಂದಚಂದಗಳನ್ನು ಎಲ್ಲರಂತೆಯೇ ಪ್ರಶಂಸಿಸುತಿದ್ದೆ. ಆದರೂ ಆ ಚಿತ್ರಗ್ರಾಹಕ ಪೋಟೋ ತೆಗೆಯಲು ಪಟ್ಟಿರಬಹುದಾದ ಕಷ್ಟ ತೊಂದರೆಗಳ ಅಂದಾಜು ಇರಲಿಲ್ಲ. ನೀವು ಸಹ ಚಿತ್ರಗ್ರಾಹಕರಾಗದ ಹೊರತು ಚಿತ್ರಗಳನ್ನು ಮೆಚ್ಚಬಹುದೇ ವಿನಃ ಅವುಗಳನ್ನು ತೆಗೆಯುವ ಕಷ್ಟ ಏನೆಂಬುದು ನಿಮಗೆ ಗೊತ್ತಾಗುವುದೇ ಇಲ್ಲ. ನಾನು ಈವರೆಗೆ ಐದಾರು ಸಾವಿರ ಹಕ್ಕಿಗಳ ಪೋಟೋ ತೆಗೆದಿರಬಹುದು. ಅವುಗಳಲ್ಲಿ ಅರ್ಧದಷ್ಟು ನೆಗೆಟಿವ್‌ಗಳಲ್ಲಾದರೂ ನಾನು ತೆಗೆಯಬಯಸಿದ ಹಕ್ಕಿಗಳೇ ಇಲ್ಲ ಎಂದ ಮೇಲೆ ಎಷ್ಟೊಂದು ಕಾಲ, ಫಿಲ್ಮು, ಹಣ ವ್ಯರ್ಥವಾಗಿರಬಹುದು. ನೀವೇ ಊಹಿಸಿ. ಇದಕ್ಕೆ ಮುಖ್ಯ ಕಾರಣ ಹಕ್ಕಿಗಳ ಪೋಟೋ ತೆಗೆಯಲು ಹೋದ ಛಾಯಗ್ರಾಹಕನಿಗೆ ತನ್ನ ಕ್ಯಾಮರಾ ಒಂದನ್ನುಳಿದು ಇನ್ನು ಯಾವುದೂ ಅವನ ಹತೋಟಿಯಲ್ಲಿ ಇಲ್ಲದ ಪ್ರತಿಕೂಲ ಸನ್ನಿವೇಶದಲ್ಲಿ ಅವನು ಕೆಲಸ ಮಾಡಬೇಕಾಗುತ್ತದೆ."[೫] ಹಾಗೆಯೇ ಅವರು ಕಂಪ್ಯೂಟರ್ ಕಲಿತರು. ಸಿತಾರ್ ನುಡಿಸುವ ಕಲೆಯನ್ನು ಪಂಡಿತ್ ರವಿಶಂಕರ್ ಅವರಿಂದ ಕಲಿತುಕೊಂಡರು. ಮೀನು ಶಿಕಾರಿ ಇವರ ಪ್ರಿಯವಾದ ಹವ್ಯಾಸಗಳು. ಪರಿಸರ, ಹಕ್ಕಿ ಪ್ರಾಣಿಗಳಿಗೆ ಸಂಬಂಧಿಸಿದ ಅವರು ರಚಿಸಿರುವ ರೇಖಾಚಿತ್ರಗಳನ್ನು ಪುಸ್ತಕ ಪೋಸ್ಟಾರ್‌ಗಳ ರೂಪದಲ್ಲಿ ಹೊರತಂದರು. ಅವರು ತೆಗೆದ ಹಕ್ಕಿಗಳ ಅಪರೂಪದ ಛಾಯಚಿತ್ರಗಳು ನಾಡಿನಾದ್ಯಂತ ಕ್ಯಾಲೆಂಡರ್‌ಗಳಲ್ಲಿ ರಾರಾಜಿಸುತ್ತಿವೆ. "ತೇಜಸ್ವಿ ಸರಳ ಹೃದಯದ ಜಂಬದ ಸೋಂಕಿಲ್ಲದ ಮನುಷ್ಯ. ಅವರಿಗೆ ನಾಯಿ ಸಾಕುವಿಕೆ ಒಂದು ಹವ್ಯಾಸವೇ ಆಗಿದೆ. ಅವರ ಕರ್ವಲೋ ಕಾದಂಬರಿಯಲ್ಲಿ ಬರುವ ನಾಯಿ 'ಕಿವಿ' ಹಾಗೂ ಅದರ ಮರಿ ಅವರಿಗೆ ಪ್ರಾಣ ಸ್ನೇಹಿತರು. ನಾಯಿಗೂ ಅವರ ಮನೆಯಲ್ಲಿ ಮನುಷ್ಯ ಸ್ಥಾನವಿದೆ"[೬]

ರಾಷ್ಟ್ರಕವಿ ಕುವೆಂಪು ಪರಿಸರವನ್ನು ಆರಾಧಿಸಿದರೆ ಪುತ್ರ ತೇಜಸ್ವಿ ಅದೇ ಪರಿಸರವನ್ನು ವೈಜ್ಞಾನಿಕವಾಗಿ ವಿಶ್ಲೇಷಣೆ ಮಾಡಿದರು. ಅವರು ಮೀನು ಹಿಡಿಯುತ್ತಾ, ಛಾಯಚಿತ್ರಗಳನ್ನು ತೆಗೆಯುತ್ತಾ ಮಲೆನಾಡಿನ ಕಾಡುಗಳಲ್ಲಿ ಅಲೆದಾಡುತ್ತಿದ್ದರು, ಎನ್ನುವುದೇ ಅವರನ್ನು ಜನಸಾಮಾನ್ಯರ ಹತ್ತಿರ ತಂದ

ಸಂಗತಿ. ಆದ್ದರಿಂದ ಅಲ್ಲಿನ ಸಾಮಾನ್ಯ ಜನರು ಅವರ ಕಥೆ ಕಾದಂಬರಿಗಳಲ್ಲಿ ಮುಖ್ಯ ಪಾತ್ರಗಳಾದವು. ಉದಾ:-ಕರ್ವಾಲೋ ಕಾದಂಬರಿಯ ಮಂದಣ್ಣ, ಕಥೆಗಳಲ್ಲಿ ಬರುವ ಪ್ಯಾರ, ಕಿವಿ, ಮಾರ, ಎಂಗ್ಟ ಮುಂತಾದವರು ವಿಶಿಷ್ಟ ಪಾತ್ರಗಳಾಗಿ ಕಂಡುಬಂದಿದ್ದಾರೆ. ಅವರು ಆಡುಭಾಷೆಯನ್ನು ಸಾಹಿತ್ಯದಲ್ಲಿ ತೊಡಗಿಸಿಕೊಂಡದ್ದು ಅವರ ಸರಳತೆಗೆ ಮತ್ತೊಂದು ಉದಾಹರಣೆ. ಹಾಗೆಯೇ "ಅವರು ಎಲ್ಲೂ ಸಹ ವಿಜ್ಞಾನಿಗಳನ್ನು ಹಾಸ್ಯಕ್ಕೆ ಒಳಪಡಿಸಿಲ್ಲ" ಇಡೀ ಮಾನವ ಬದುಕಿನ ಪರಿಯೇ ಶಿಕಾರಿ ಎಂಬುದು ಅವರ ನಿಚ್ಚಳ ನಿಲುವು. ಅಂತೆಯೇ ಮೂಡಿಗೆರೆ ತೇಜಸ್ವಿಯವರ ಕರ್ಮಭೂಮಿಯೇ ಆಯಿತು. ಇವರ ಕಥೆಗಳಲ್ಲಿ ಅಲ್ಲಲ್ಲಿ ನವಿರಾದ ಹಾಸ್ಯ ಕಂಡುಬರುತ್ತದೆ. ಪ್ರೇಮ-ಕಾಮಗಳ ಬಗ್ಗೆ ಲೇಖಕರು ಕೊಡುವ ಅರ್ಥವಂತಿಕೆ ವಿಭಿನ್ನವಾಗಿದೆ. "ಪ್ರೇಮವೆನ್ನುವುದು ಒಂದು ಏಕಘಟಕ, ಸೃಷ್ಟಿಸ್ಥಿತಿ ಮೂಲವಾದ ಏಕಶಕ್ತಿ ಎನ್ನುವ ಅರ್ಥದಲ್ಲಿ ನಾನು ಬಳಸುತ್ತೇನೆ; ಎಂದು ತೇಜಸ್ವಿಯವರೆ ಹೇಳಿಕೊಂಡಿದ್ದಾರೆ. ಸುಧಾರಣೆಗಳಿಗಿಂತ ಬದಲಾವಣೆಯನ್ನೇ ಹೆಚ್ಚು ಪ್ರಿಯವಾಗಿಸಿಕೊಂಡ ನವ್ಯ ಲೇಖಕರಂತೆ ತೇಜಸ್ವಿಯವರು ಜೀವನಮುಖಿಯಾದ ಸಾಹಿತ್ಯವನ್ನು ಸೃಷ್ಟಿಸುವ ಕಡೆಗೆ ಹೆಚ್ಚು ಗಮನ ನೀಡಿರುವುದು ಅವರ ಕಥೆಗಳಿಂದ ತಿಳಿದುಬರುತ್ತದೆ.

ಕುವೆಂಪು ಅವರ ಮಗನಾಗಿ ತೇಜಸ್ವಿಯವರು ಯಾವ ಎತ್ತರಕ್ಕೆ ಬೇಕಾದರೂ ಅವರು ಏರಬಹುದಿತ್ತು. ಸಾಹಿತ್ಯದ ನೆಪದಲ್ಲಿ ರಾಜಕೀಯ ಮಾಡಿಕೊಂಡು ಎಷ್ಟೋ ಮೇಲೆರುವ ಸಾಹಿತಗಳಿದ್ದಾರೆ. ತೇಜಸ್ವಿಯವರಿಗೆ ಅದಾವುದೂ ಇಷ್ಟವಾಗಲಿಲ್ಲ. ಅಷ್ಟೇ ಏನು, ಕುವೆಂಪು ಅವರ ಮಗ ಎಂದೇ ಎಲ್ಲೂ ತೋರಿಸಿಕೊಳ್ಳುತ್ತಿರಲಿಲ್ಲ. ತಂದೆ ಅಂದುಕೊಂಡದ್ದೆ ಬೇರೆ, ಮಗ ಸಾಧಿಸಿದ್ದೇ ಬೇರೆ. ಇಂತಹ ಸಾಹಿತ್ಯ ರತ್ನ ೫ ಎಪ್ರಿಲ್ ೨೦೦೭ರಲ್ಲಿ ಹೃದಯಾಘಾತದಿಂದ ನಿಧನರಾದರು. ಇಂದು ಅವರು ನಮ್ಮೊಟ್ಟಿಗಿಲ್ಲವಷ್ಟೆ. ಆದರೆ ಅವರ ಸಾಹಿತ್ಯ ಕೃತಿಗಳ ಮೂಲಕ ಇಂದಿಗೂ ಪ್ರತಿ ಓದುಗನ ಮನದಲ್ಲಿ ಚಿರಾಯುವಾಗಿದ್ದಾರೆ.

## ತೇಜಸ್ವಿಯವರ ಸಾಹಿತ್ಯ ಕೃತಿಗಳು

**ಕಥಾ ಸಂಕಲನ**

೧. ಹುಲಿಯೂರಿನ ಸರಹದ್ದು (೧೯೬೨)

೨. ಅಬಚೂರಿನ ಪೋಸ್ಟಾಫೀಸು (೧೯೭೩)

೩. ಕಿರುಗೂರಿನ ಗಯ್ಯಾಳಿಗಳು (೧೯೯೧)

೪. ಪಾಕಕ್ರಾಂತಿ ಮತ್ತು ಇತರ ಕತೆಗಳು

**ಕಿರು ಕಾದಂಬರಿಗಳು**

೧. ಸ್ವರೂಪ (೧೯೬೬)

೨. ನಿಗೂಢ ಮನುಷ್ಯರು (೧೯೭೩)

**ಕಾದಂಬರಿಗಳು**

೧. ಕರ್ವಾಲೋ (೧೯೮೦)

೨. ಚಿದಂಬರ ರಹಸ್ಯ (೧೯೮೫)

೩. ಜುಗಾರಿಕ್ರಾಸ್(೧೯೯೪)

೪. ಮಾಯಾಲೋಕ ಭಾಗ–೧ (೨೦೦೬)]

**ಪರಿಸರ ಮತ್ತು ವೈಜ್ಞಾನಿಕ ಕಥಾ ಸಂಕಲನಗಳು**

೧. ಪರಿಸರದ ಕಥೆ (೧೯೯೧)

೨. ಎರೋಪ್ಲೇನ್ ಚಿಟ್ಟೆ ಮತ್ತು ಇತರೆ ಕಥೆಗಳು (೧೯೯೩)

೩. ಕಾಡಿನ ಕಥೆಗಳು ಭಾಗ–೧ (೧೯೯೩)

೪. ಕಾಡಿನ ಕಥೆಗಳು ಭಾಗ–೨

೫. ಕಾಡಿನ ಕಥೆಗಳು ಭಾಗ–೩ (೧೯೯೪)

೬. ಕಿರಿಯರಿಗಾಗಿ ಪರಿಸರ (೧೯೯೬)

**ಜೀವನ ಚರಿತ್ರೆ**

೧. ಅಣ್ಣನ ನೆನಪು (೧೯೯೬)

**ಕಾವ್ಯ**

ಸೋಮುವಿನ ಸ್ವಗತ ಲಹರಿ

**ನಾಟಕ**

ಯಮಳ ಪ್ರಶ್ನೆ

ವೈಚಾರಿಕ ಬರಹ

ವ್ಯಕ್ತಿ ವಿಶಿಷ್ಟ ಸಿದ್ಧಾಂತ

**ಕೃಷಿ ಚಿಂತನೆ**

ಸಹಜಕೃಷಿ

**ಪ್ರವಾಸ ಕಥನ**

ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್

**ಅನುವಾದ**

ಲೋಹಿಯ

**ಸಂಶೋಧನೆ ಮತ್ತು ವೈಜ್ಞಾನಿಕ ಬರವಣಿಗೆ**

೧. ಫ್ಲೆಯಿಂಗ್ ಸಾಸರ್ಸ್ ಭಾಗ–೧ (೧೯೯೩)

೨. ಫ್ಲೆಯಿಂಗ್ ಸಾಸರ್ಸ್ ಭಾಗ–೨ (೧೯೯೩)

೩. ಮಿಸ್ಸಿಂಗ್ ಲಿಂಕ್ (೧೯೯೧)

೪. ವಿಸ್ಮಯ ಭಾಗ–೧ (೧೯೯೩)

೫. ವಿಸ್ಮಯ ಭಾಗ–೨ (೧೯೯೩)

೬. ವಿಸ್ಮಯ ಭಾಗ–೩ (೧೯೯೪)

**ಪರಿಸರ ಮತ್ತು ಜೀವ ವಿಜ್ಞಾನ**

೧. ದಕ್ಷಿಣ ಭಾರತದ ಹಕ್ಕಿಗಳು (೧೯೯೩)

೨. ಮಿಂಚುಳ್ಳಿ–ಕನ್ನಡ ನಾಡಿನ ಹಕ್ಕಿಗಳು ಭಾಗ–೧ (೧೯೯೪)

೩. ಹೆಜ್ಜೆ ಮೂಡದ ಹಾದಿ: ಕನ್ನಡ ನಾಡಿನ ಹಕ್ಕಿಗಳು ಭಾಗ–೩ (೧೯೯೬)

೪. ಹಕ್ಕಿ ಪುಕ್ಕ (೧೯೯೭)

೫. ಹುಳುಗಳ ವಿಸ್ಮಯ ಕೋಶ –೧ ನಡೆಯುವ ಕಪ್ಪೆ ಹಾರುವ ಎಲೆ (೧೯೯೭)

**ಚಲನಚಿತ್ರ ಪ್ರಶಸ್ತಿಗಳು**

೧. ಅಬಚೂರಿನ ಪೋಸ್ಟಾಫೀಸು– ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ

೨. ತಬರನ ಕಥೆ– ರಾಷ್ಟ್ರೀಯ ಸ್ವರ್ಣಕಮಲ ಪ್ರಶಸ್ತಿ (೧೯೮೮)

೩. ಕುಬಿ ಮತ್ತು ಇಯಾಲ – ರಾಜ್ಯ ಮತ್ತು ರಾಷ್ಟ್ರೀಯ ಪ್ರಶಸ್ತಿ, ಚಿನ್ನದ ಪದಕ (೧೯೯೦)

**ನಾಟಕ ರೂಪಾಂತರ**

೧. ತಬರನ ಕಥೆ :ಆರ್.ನಾಗೇಂದ್ರ ಅವರಿಂದ ಪ್ರತಿಭಾ ನಾಟಕ ಪ್ರಕಾಶನ, ಬೆಂಗಳೂರು–೧೯೮೬

೨. ಕಿರಿಗೂರಿನ ಗಯ್ಯಾಳಿಗಳು : ಎಂ.ಎನ್. ರಾವ್ ಜಾದವ್ ಅವರಿಂದ ನವಕರ್ನಾಟಕ ಪ್ರಕಾಶನ ಬೆಂಗಳೂರು–೧೯೯೯

೩. ಕೃಷ್ಣೇಗೌಡನ ಆನೆ : ಆರ್.ನಾಗೇಶ್ ನಿರ್ದೇಶನದಲ್ಲಿ ರಂಗಾಯಣ ಪ್ರದರ್ಶಿತ. ೨೦೦೨

## ಮಿಲೆನಿಯಂ ಮಾಲೆ (೧೯೯೭)

೧. ಹುಡುಕಾಟ

೨. ಜೀವನ ಸಂಗ್ರಾಮ

೩. ಫೆಸಿಫಿಕ್ ದ್ವೀಪಗಳು

೪. ಚಂದ್ರನಚೂರು

೫. ನೆರೆಹೊರೆಯ ಗೆಳೆಯರು

೬. ಮಹಾಯುದ್ಧ – ೧

೭. ಮಹಾಯುದ್ಧ – ೨

೮. ಮಹಾಯುದ್ಧ – ೩

೯. ದೇಶವಿದೇಶ – ೧

೧೦. ದೇಶವಿದೇಶ – ೨

೧೧. ದೇಶವಿದೇಶ – ೩

೧೨. ದೇಶವಿದೇಶ – ೪

೧೩. ವಿಸ್ಮಯ ವಿಶ್ವ –೧

೧೪. ವಿಸ್ಮಯ ವಿಶ್ವ –೨

೧೫. ಮಹಾಪಲಾಯನ – ೧

೧೬. ಅಡ್ವೆಂಚರ್

## ಅನ್ಯಭಾಷೆಗಳಿಗೆ ಅನುವಾದಗೊಂಡಿರುವ ಕೃತಿಗಳು

೧. ಅಬಚೂರಿನ ಪೋಸ್ಟಾಫೀಸ್ : ಮರಾಠಿ, ಹಿಂದಿ, ಮಲಯಾಳಂ ಮತ್ತು ಇಂಗ್ಲೀಷ್ ಭಾಷೆಗಳಿಗೆ ಭಾಷಾಂತರಗೊಂಡಿದೆ.

೨. ನಿಗೂಢ ಮನುಷ್ಯರು : ಇಂಗ್ಲೀಷ್‌ಗೆ ಅನುವಾದಗೊಂಡು ಪೆಂಗ್ವಿನ್ ಪ್ರಕಾಶನದಿಂದ ಪ್ರಕಟವಾಗಿದೆ.

೩. ಕರ್ವಾಲೋ : ಇಂಗ್ಲೀಷ್, ಜಪಾನಿ ಭಾಷೆಗೂ ಅನುವಾದವಾಗಿದೆ. ಪೆಂಗ್ವಿನ್ ಪ್ರಕಾಶನ ಮತ್ತು ಗುರತ್ಮನ್ ಪ್ರಕಾಶನಗಳಿಂದ ಪ್ರಕಟಗೊಂಡಿದೆ.

೪. ಚಿದಂಬರ ರಹಸ್ಯ : ಮರಾಠಿ, ತಮಿಳು ಭಾಷೆಗೆ ಅನುವಾದವಾಗಿದೆ.

೫. ಕಿರಗೂರಿನ ಗಯ್ಯಾಳಿಗಳು : ಮಲಯಾಳಂ, ಹಿಂದಿ, ಇಂಗ್ಲೀಷ್ ಭಾಷೆಗಳಿಗೆ ಭಾಷಾಂತರವಾಗಿದೆ.

## ಪ್ರಶಸ್ತಿಗಳು

೧. ಪ್ರಜಾವಾಣಿ ಪತ್ರಿಕೆಯ ದೀಪಾವಳಿ ಕಥಾ ಪ್ರಶಸ್ತಿ 'ಲಿಂಗಬಂದಿ' ಕಥೆಗೆ

೨. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೮೧ 'ಕರ್ವಾಲೋ' ಕಾದಂಬರಿಗೆ

೩. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೮೭

೪. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೮೮

೫. ಭಾರತೀಯ ಭಾಷಾ ಪರಿಷತ್ತಿನ ಪ್ರಶಸ್ತಿ ೧೯೮೯ರಲ್ಲಿ ಚಿದಂಬರ ರಹಸ್ಯ ಕಾದಂಬರಿಗೆ

೬. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೯೧ 'ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್' ಪ್ರವಾಸ ಕಥನಕ್ಕೆ

೭. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೯೨ ಪರಿಸರದ ಕಥೆ, ಕೃತಿಗೆ

೮. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೯೨ 'ಕಿರಿಗೂರಿನ ಗಯ್ಯಾಳಿಗಳು'ಕಥಾಸಂಕಲನಕ್ಕೆ

೯. ಶಿವರಾಮ ಕಾರಂತ ಪ್ರಶಸ್ತಿ ೧೯೯೪ "ಮಿಸ್ಸಿಂಗ್ ಲಿಂಕ್" ಕೃತಿಗೆ

೧೦. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ೧೯೯೪ ಕಾಡಿನ ಕಥೆಗಳು ಭಾಗ–೩ ಕೃತಿಗೆ

೧೧. ಕರ್ನಾಟಕ ಸರ್ಕಾರದ ಜೀವವಿಜ್ಞಾನ ಮತ್ತು ಪರಿಸರ ವಿಜ್ಞಾನ ವತಿಯಿಂದ ಪರಿಸರ ಪ್ರಶಸ್ತಿ ೧೯೯೩ 'ಪರಿಸರ ಕಾಳಜಿಯ ಒಟ್ಟು ಬರಹಕ್ಕೆ

೧೨. ಕರ್ನಾಟಕ ಸರ್ಕಾರದ ಪ್ರತಿಷ್ಠಿತ ಪಂಪ ಪ್ರಶಸ್ತಿ ೨೦೦೧, ಸಮಗ್ರ ಸಾಹಿತ್ಯಕ್ಕೆ

೧೩. ಮಾಯಾಮೃಗ ಕಥೆ– ಕಥಾಪ್ರಶಸ್ತಿ

## ಅಡಿ ಟಿಪ್ಪಣಿ

೧. ಬೆ.ಗೋ.ರಮೇಶ್ : ಪೂರ್ಣಚಂದ್ರತೇಜಸ್ವಿ , ಪುಟ–೫

೨. ಪೂರ್ಣಚಂದ್ರ ತೇಜಸ್ವಿ : ಅಣ್ಣನ ನೆನಪು, ಪುಟ–೬

೩. ಪೂರ್ಣಚಂದ್ರತೇಜಸ್ವಿ : ಅಣ್ಣನ ನೆನಪು, ಪುಟ–೧೮೫

೪. ಪೂರ್ಣಚಂದ್ರತೇಜಸ್ವಿ : ಅಣ್ಣನ ನೆನಪು, ಪುಟ–೨೩೩

೫. ಪೂರ್ಣಚಂದ್ರತೇಜಸ್ವಿ : ಪರಿಸರದ ಕಥೆ, ಪುಟ–೩೮

೬. ಡಾ.ಎಚ್.ಎಂ. ಮಹೇಶ್ವರಯ್ಯ : ಪೂರ್ಣಚಂದ್ರತೇಜಸ್ವಿ – ಪುಟ–೧೨

# ಅಧ್ಯಾಯ – ೪

## ತೇಜಸ್ವಿ ಹಾಗೂ ಇತರೆ ಲೇಖಕರ ಹಾಸ್ಯಪ್ರಜ್ಞೆ ಸಂಕ್ಷಿಪ್ತ ಪರಿಚಯ

ಕಥೆ ಹೇಳುವುದು ಕೇಳುವುದು ಎಂದರೆ ಮಾನವ ಜೀವಿಗೆ ಇಲ್ಲದ ಪ್ರೀತಿ. ಅದು ಸರ್ವ ಜನಾಧಾರಣೀಯವಾಗಿ ಮೊದಲಿನಿಂದಲೂ ಮಾನವನಲ್ಲಿ ಬೆಳೆದು ಬಂದಿದೆ. ಮಾನವನಿಗೆ ಮಾತು ಬಂದಾಗಿನಿಂದ ಕಥೆ ಹೇಳುವುದೂ ಸಾಹಿತ್ಯ ಹುಟ್ಟಿದಾಗಿನಿಂದ ಕಥೆ ಬರೆಯುವುದು ರೂಢಿಯಾಗಿ ಬಿಟ್ಟಿದೆ. ಕಥಾ ಪ್ರಪಂಚ ನಿಜವಾಗಿಯೂ ವಿಶಾಲವಾದುದು. "ಕಥೆ ಇಲ್ಲದೆ ಕಾವ್ಯವಿಲ್ಲ. ಮಹಾಕಾವ್ಯದಿಂದ ಸಣ್ಣ ಮಕ್ಕಳ ಹರಿಣೆಯವರೆಗೂ ಅದು ಹಬ್ಬಿಕೊಂಡು ನಿಂತಿದೆ. ಕಾಳಿದಾಸ, ಪಂಪ, ಹರಿಹರ, ಕುಮಾರವ್ಯಾಸ, ಲಕ್ಷ್ಮೀಶ, ಮುದ್ದಣ್ಣರು ಮಹಾಕವಿಗಳೆನಿಸಿಕೊಂಡದ್ದು ಕಥೆಗಳನ್ನು ಸ್ವಾರಸ್ಯಮಯವಾಗಿ ಹೇಳಿದುದರಿಂದಲೇ"[1] ಕಥೆಯೇ ಕವಿಯ ಜಗತ್ತು. ಅವನು ಕಥೆ ಹೇಳುತ್ತಲೇ ನಮ್ಮನ್ನು ನಗಿಸುತ್ತಾನೆ, ಅಳಿಸುತ್ತಾನೆ, ಅಂಜಿಸುತ್ತಾನೆ. ನೀತಿಬೋಧನೆ ಮಾಡುತ್ತಾನೆ. ನಗೆಯ ಬೆಳದಿಂಗಳನ್ನು ಪಸರಿಸುತ್ತಾನೆ ಏನನ್ನನಾದರೂ ಬರೆದರು ಕಥೆ ಬೇಕು, ಅದರಲ್ಲೂ ಹಾಸ್ಯವಿದ್ದರಂತೂ ಅದು ಓದುಗರ ಮನಸ್ಸನ್ನು ಕೂಡಲೇ ಹಿಡಿಯುತ್ತದೆ.

ಕನ್ನಡ ಸಾಹಿತ್ಯದಲ್ಲಿ ಹಾಸ್ಯದ ಬೆಳವಣಿಗೆ ಇಪ್ಪತ್ತನೆ ಶತಮಾನದ ಆದಿಭಾಗದಲ್ಲಿ ಪ್ರಾರಂಭವಾಯಿತು ಎನ್ನಬಹುದು. ಅಲ್ಲಿಯವರೆಗೆ ಸುಪ್ತಾವಸ್ಥೆಯಲ್ಲಿದ್ದ ಕನ್ನಡದ ಹಾಸ್ಯ ಸಾಹಿತ್ಯ ಆಗ ಎದ್ದು ಚಟುವಟಿಕೆಯಿಂದ ಕೈಕಾಲು ಝಾಡಿಸಲು ಪ್ರಾರಂಭಿಸಿತು. ಗದ್ಯ, ಪದ್ಯ, ಪ್ರಹಸನ, ವಿಡಂಬನೆ, ವ್ಯಂಗ್ಯಚಿತ್ರ ಇತ್ಯಾದಿ ಎಲ್ಲಾ ಪ್ರಕಾರಗಳನ್ನು ಉಪಯೋಗಿಸಿಕೊಳ್ಳುತ್ತಾ ತನ್ನ ಮೊದಲ ಹೆಜ್ಜೆಗಳನ್ನಿಟ್ಟಿತು. ಇಪ್ಪತ್ತೆನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಕನ್ನಡದಲ್ಲಿ ಹಾಸ್ಯ ಸಾಹಿತ್ಯ ದೃಢವಾಗಿ ಬೆಳೆದಿತ್ತು.

ನಿಜವಾಗಿ ಇಪ್ಪತ್ತನೆಯ ಶತಮಾನದ ಮೂರು–ನಾಲ್ಕು ಮತ್ತು ಐದನೆಯ ದಶಕಗಳು ಕನ್ನಡ ಹಾಸ್ಯಸಾಹಿತ್ಯದ ಸುವರ್ಣಯುಗ ಎನ್ನಬಹುದು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲು ಕಥೆ ಹೆಣೆದು ಹೇಳಿದವರೆಂದರೆ ದಿವಂಗತ.ಪಂಜೆಮಂಗೇಶರಾಯರು. ಅವರು ಮುಖ್ಯವಾಗಿ ಸಣ್ಣಮಕ್ಕಳಿಗಾಗಿಯೇ ಕಥೆ ಹೇಳಿದುದರಿಂದ ಅವು ತಿಳಿಹಾಸ್ಯದಿಂದ ಕೂಡಿ, ರುಚಿಕಟ್ಟಾಗಿವೆ.

ಹಾಸ್ಯರಸವನ್ನೇ ಪ್ರಧಾನವಾಗಿಟ್ಟುಕೊಂಡು ಕಥೆ ರಚನೆ ಮಾಡಿದವರಲ್ಲಿ ಎ.ಆರ್.ಕೃಷ್ಣಶಾಸ್ತ್ರಿಗಳೇ ಮೊದಲಿಗಲೆನ್ನಬಹುದು. ಅವರ "ಶ್ರೀಪತಿಯ ಕಥೆಗಳು" ಹೆಚ್ಚು ಜನಪ್ರಿಯವಾದವು. ಈ ಕಥಾಸಂಗ್ರಹದಲ್ಲಿ ಒಟ್ಟು ಹನ್ನೆರಡು ಕತೆಗಳಿವೆ. 'ನನ್ನ ಸ್ನೇಹಿತೆ', ಜ್ಯೋತಿಷ್ಯಕ್ಕೆ ಬಹುಮಾನ', 'ಶಾನುಭೋಗರ ಪುಣ್ಯ', ಹುಚ್ಚೋ ಅಲ್ಲವೋ', 'ಅಗ್ಗದ ಮದುವೆ', ಬಂಗಾಲಿಯವಾಸ', ಮುಂತಾದ ಕತೆಗಳು ರಸಭರಿತವಾಗಿವೆ. ಪ್ರೊ.ಕೃಷ್ಣಶಾಸ್ತ್ರಿಗಳ ಗದ್ಯಶೈಲಿ ಮನೋಹರವಾಗಿರುವುದರಿಂದ

ಅವು ಕೂಡಲೇ ಓದುಗರ ಮನಸ್ಸನ್ನು ಸೆಳೆಯುತ್ತದೆ. ನೀತಿಬೋಧನೆಯ ಈ ಕಥೆಗಳ ಗುರಿಯಾಗಿದ್ದರು. ಅದನ್ನು ನೇರವಾಗಿ ಹೇಳದಿರುವಲ್ಲಿಯೇ ಕಥೆಗಾರರ ಕಥನಕೌಶಲ ಅಡಕವಾಗಿದೆ.

'ಶ್ರೀಪತಿಯ ಕಥೆ'ಗಳಲ್ಲಿ ದುಃಖದ ಚಿತ್ರಗಳೇ ಹೆಚ್ಚಾಗಿದ್ದರೂ ಕತೆಗಾರರು ಸ್ವತಃ ರಸಿಕರಾಗಿರುವುದರಿಂದ ಕತೆಗಳ ಮಧ್ಯೆದಲ್ಲಿ ಹಾಸ್ಯದ ಆವರಣ ಹೆಣೆಯಲು ಯತ್ನಿಸಿದ್ದಾರೆ. 'ಅಗ್ಗದ ಮದುವೆ' ಮತ್ತು 'ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ' ಈ ಎರಡು ಕತೆಗಳಲ್ಲಿ ಸರಸ ಹಾಸ್ಯ ಮಡುಗಟ್ಟಿ ನಿಂತಿದೆ. ಉಳಿದ ಕಥೆಗಳಲ್ಲಿರುವ ಹಾಸ್ಯದ ರುಚಿಯನ್ನು ಓದುತ್ತಲೇ ಸವಿದರೆ ಒಳ್ಳೆಯದೆನಿಸುತ್ತದೆ. 'ಹಾಸ್ಯವಿಲ್ಲದೆ ಕತೆಯಿಲ್ಲ' ಎನ್ನುವ ಮಾತನ್ನು ದಿಟ ಮಾಡಿ ತೋರಿಸಿದವರಲ್ಲಿ ಪ್ರೊ.ಎ.ಆರ್.ಕೃಷ್ಣಶಾಸ್ತ್ರೀಗಳೇ ಅಗ್ರಗಣ್ಯರೆನ್ನಬಹುದು. ಹಾಸ್ಯವನ್ನು ತಮ್ಮ ಕತೆಗಳಲ್ಲಿ ರೂಢಿಸಿಕೊಂಡವರಲ್ಲಿ ಮತ್ತೊಬ್ಬರೆಂದರೆ 'ಶ್ರೀನಿವಾಸರು' ಇವರನ್ನು ಸಣ್ಣಕತೆಗಳ ಜನಕರೆಂದೇ ಕರೆಯುತ್ತಾರೆ. ಅವರ ಕಥನ ಕಲೆಗೆ ಬೆರಗಾದವರೇ ಇಲ್ಲ. ಸರಳವಾದ ಸರಸ ವಿನೋದವನ್ನು ಇವರ ಕಥೆಗಳಲ್ಲಿ ನಾವು ಕಾಣಬಹುದು.

ಇವರ ಕತೆಗಳನ್ನು ಓದುಗರು ಹೆಚ್ಚಾಗಿ ಮೆಚ್ಚಲು ಕಾರಣವೆಂದರೆ ಆಯಾ ಕತೆಗಳಲ್ಲಿ ಬರುವ ಸರಸಹಾಸ್ಯ. ಶ್ರೀನಿವಾಸರ ಮಾತಿನಲ್ಲಿಯೇ ನಗೆಯ ಮಲ್ಲಿಗೆ ಅರಳುವಂತೆ ಕಾಣುತ್ತದೆ. ಅವರ ಬರಹದಲ್ಲಿ ವಿಕಾಸ, ವಿಲಾಸಗಳೆರಡೂ ಅಡಕವಾಗಿ ನಿಲ್ಲುವುದೊಂದು ವೈಶಿಷ್ಟ್ಯ. ಶ್ರೀನಿವಾಸರ ಹಾಸ್ಯಕ್ಕೆ ಉತ್ತಮ ಉದಾಹರಣೆಯೆಂದರೆ 'ನಮ್ಮ ಮೆಷ್ಟ್ರು' ಅಲ್ಲಿ ನವಿರಾದ ಹಾಸ್ಯವು ಲಾಸ್ಯ ಮಾಡಿದೆ. ಮೇಷ್ಟ್ರು ಸ್ಕೂಲ್ ನಡೆಸುವುದರ ಜೊತೆಗೆ ಸಂಸಾರವನ್ನು ನಡೆಸಬೇಕಾಗಿದೆ. ಅವರ ಜೀವನದಲ್ಲಿ ಯಾವುದು ತಾನೇ ತಾನಾಗಿ ನಡೆಯುವುದಿಲ್ಲ. ಒಂದು ದಿವಸ ಸ್ಕೂಲಿನಲ್ಲಿ ನಡೆದ ವಿಷಯವೇ ಅಲ್ಲಿ ಹಾಸ್ಯಕಥೆಯಾಗಿ ಮೆರೆದಿದೆ. ಶಾಲೆಯ ಮಕ್ಕಳ ಲೀಲಾವಿನೋದಗಳು, ಚೇಷ್ಟೆ-ಕುಚೇಷ್ಟೆಗಳು ಹೃದಯಂಗಮವಾಗಿ ಬಂದಿದೆ. ಮೆಷ್ಟ್ರೂ ವಿದ್ಯಾರ್ಥಿನಿ ಸರಸ್ವತಮ್ಮನಿಗೆ 'ಚೆನ್ನಾಗಿ ಓದು ತಾಯಿ, ಗೌರಮ್ಮ ಓದಿದ ಹಾಗೆ ಓದಬೇಕು'ಎಂದು ಕೇಳಿಕೊಂಡರೆ, ಅವಳು ವಿನೋದಪೂರ್ಣವಾಗಿ "ಅವಳೇ ಚೆನ್ನಾಗಿ ಓದಲಿ ಮೇಷ್ಟ್ರೇ ನನಗೇನು ಮೆಳ್ಳಗಣ್ಣೇ?" ಎನ್ನುತ್ತಾಳೆ. ಕುಳಿತ ಬಾಲಕಿಯರೆಲ್ಲರೂ ನಗುತ್ತಾರೆ. ಗೌರಮ್ಮನ ಮೆಳ್ಳೆಗಣ್ಣು ವಿಡಂಬನೆಯ ಭಲ್ಲೆಗೆ ಗುರಿಯಾಗುತ್ತದೆ. ಅಂದೇ ಶಾಲೆಗೆ ಇನ್ಸ್‌ಪೆಕ್ಟರ್‌ರರು ಬರುತ್ತಾರೆ. ಒಳಗೆ ಬಂದೊಡನೆ ಅವರ ಕಣ್ಣಿಗೆ ಬೀಳುವವಳು ಬಾಕಿನ ಮೇಲೆ ಕುಳಿತ ವೃದ್ಧಕನ್ಯೆ "ಅವಳು ನಿಮ್ಮ ವಿದ್ಯಾರ್ಥಿನಿಯೇ? ಸ್ಕೂಲಿನಲ್ಲಿ ಹೆಸರು ಹಚ್ಚಿಕೊಂಡಿದ್ದೀರ?" ಎಂದು ಸಾಹೇಬರು ಕೇಳಿದರೆ ಮೇಷ್ಟ್ರು ತಡಬಡಿಸುತ್ತಾರೆ. ಅವಳು ಮೇಷ್ಟ್ರ ಹೆಂಡತಿ. ಮೇಷ್ಟ್ರು ಉಪ್ಪು ತರುತ್ತೇನೆ ಎಂದು ಹೇಳಿ ಮರೆತು ಹಾಗೆ ಸ್ಕೂಲಿಗೆ ಬಂದುದಕ್ಕಾಗಿ ಅವಳು ನೆನಪುಕೊಡಲು ಬಂದಿದ್ದಾಳೆಂದು ಕೇಳಿದ ಮೇಲಂತೂ ಸರ್ವರಿಗೂ ನಗೆ, ಅಂದೇ ಒಂದು ಹುಡುಗಿ ಬೆಕ್ಕಿನ ಮರಿಯೊಡನೆ ಶಾಲೆಗೆ ಬರಬೇಕೇ? ಬಂದವಳೇ ಸಾಹೇಬರಿಗೆ ಅಂಜಿ ಅದನ್ನು ತನ್ನ ಅಂಗಿಯಲ್ಲಿ ಮುಚ್ಚಿಕುಳಿತಿದ್ದಳು. ಅದು ಒದ್ದಾಡಿದರು ಬಿಡದೇ ಅವಳು ಬಿಗಿದು ಹಿಡಿದಿದ್ದಳು. ಅದು ಏನೆಂದು ಶೋಧ ಮಾಡಲು ಹೋದ ಸಾಹೇಬರ ಬೆರಳು ಬೆಕ್ಕಿಗಾಹುತಿಯಾಗುತ್ತದೆ. ಹುಡುಗರೆಲ್ಲ ನಗುತ್ತಾರೆ.

ಸಾಹೇಬರು ನದಿ ಹೇಗಾಗುತ್ತದೆ? ಎಂದು ಪ್ರಶ್ನೆ ಹಾಕಿದರೆ, ಸರಸ್ವತಿ ಎಂಬ ವಿದ್ಯಾರ್ಥಿನಿ "ಅಲ್ಲಿ ಇಲ್ಲಿ ಬಿದ್ದ ನೀರು ಎಲ್ಲ ಸೇರಿ ಹೋಗಿ ನದಿಯಾಗುತ್ತದೆ" ಎಂದು ಉತ್ತರ ಕೊಡುತ್ತಾಳೆ. ಈ ಮಾತು ಕೇಳಿ ಸಾಹೇಬರು ನಗುವುದಲ್ಲದೆ ಮೇಷ್ಟರ ಪ್ರಶಂಶೆ ಮಾಡುತ್ತಾರೆ. ಶ್ರೀನಿವಾಸರು ತಮ್ಮ ಹಾಸ್ಯಮಯ ಶೈಲಿಯಲ್ಲಿ "ಇಲಿಗಳನ್ನು ಹಿಡಿಯುವ ಶೌರ್ಯ ಬೆಕ್ಕಿಗೆ ಹೇಗೊ ಹಾಗೆ ಮೇಷ್ಟ್ರುಗಳ ಮೇಲೆ ಇನ್ಸ್‌ಪೆಕ್ಟರ್‌ಗಳಿಗೆ ಅಧಿಕಾರ" ಎಂದು ಹೇಳಿ ನಮ್ಮನ್ನು ನಗಿಸುತ್ತಾರೆ. ಕತೆಯ ಕೊನೆಯಲ್ಲಿ ಮೇಷ್ಟ್ರಿಗೆ ಎರಡು ರೂಪಾಯಿ ಪಗಾರವೇರಿದಾಗ ಅವರಿಗಾದ ಆನಂದವನ್ನು ಅವರ ಸ್ವಭಾವವನ್ನು ಕತೆಗಾರರು ಹೆಚ್ಚು ಹಾಸ್ಯಮಯವಾಗಿ ಚಿತ್ರಿಸುತ್ತಾರೆ. ಇಂತಹ ಮಧುರಹಾಸ್ಯವನ್ನು ಶ್ರೀನಿವಾಸರ ಹಲವು ಕತೆಗಳಲ್ಲಿ ನಾವು ಕಾಣಬಹುದು.

ಶಿವರಾಮಕಾರಂತರು ಏನೇ ಬರೆದರೂ ನಗೆಯನ್ನು ಮರೆಯತಕ್ಕವರಲ್ಲ. ಅವರ ಕಲ್ಪನಾಸೃಷ್ಟಿಯಲ್ಲಿ ಮೂಡಿಬಂದ "ಹಳ್ಳಿಯ ಸಮಸ್ತರು", ನಮ್ಮನ್ನು ನಗಿಸುತ್ತಲೆ ತಮ್ಮ ಪರಿಚಯ ಮಾಡಿಕೊಡುತ್ತದೆ. "ಕಾರಂತರು ತಮ್ಮ ಸುತ್ತಮುತ್ತಲೂ ಸುಳಿಯುತ್ತಿರುವ ವ್ಯಕ್ತಿಗಳನ್ನೇ ಕುರಿತು ಬರೆಯುವುದರಿಂದ ಅವರ ನಗೆಗೆ ಜೀವತುಂಬಿಬಿಡುತ್ತದೆ. ಆ ವ್ಯಕ್ತಿಗಳಲ್ಲಿರುವ ದುರಾಭಿಮಾನ, ಕುರೂಪತನ, ಸ್ವಭಾವದ ಡೊಂಕು ನಗೆಗೆ ಕಾರಣವಾಗಿಬಿಡುತ್ತದೆ. ಕಾರಂತರ ಹಾಸ್ಯವು ವ್ಯಕ್ತಿಗಳಲ್ಲಿರುವ ಕೊಳೆಯನ್ನು ತೊಳೆಯುವ ನಿರ್ಮಲ ಗಂಗೆಯಂತೆ ಕತೆಗಳುದ್ದಕ್ಕೂ ಹರಿದುಬಂದಿದೆ" ಹಳ್ಳಿಯ ಹತ್ತು ಸಮಸ್ತರು ಕೃತಿಯಲ್ಲಿ ಬಂದಿರುವ ಪಾತ್ರಗಳಾದ 'ಸೀತ್ಯೆತಾಳರು, ಗಾಣದ ಸಂಕಪ್ಪ', ಪಟಾಳಿ ಪರಮಯ್ಯ ಮತ್ತು ಸೊಸೆ ಬ್ಯಾರಿ ನಮ್ಮನ್ನು ಹೊಟ್ಟೆ ಹುಣ್ಣಾಗುವಂತೆ ನಗೆಸಲು ಬಿಡರು. ಕಾರಂತರ ಒಂದೊಂದು ಸನ್ನಿವೇಶವು ಒಂದೊಂದು ಬಗೆಯ ನಗೆಯನ್ನು ನೀಡುತ್ತದೆ. ನಾರಾಯಣನ ಹೆಂಡತಿ ನಾಗಕ್ಕ, ಸೀತ್ಯೆತಾಳರ ಹೆಂಡತಿ ಪಾತಮ್ಮ ಬೇರೆ ಬೇರೆಯಾಗಿ ಬಹುದಿವಸಗಳಾಗಿಲ್ಲ. ಅದುದರಿಂದ ಒಬ್ಬರನ್ನು ಕಂಡರೆ ಒಬ್ಬರಿಗಾಗದು. ಮನೆಯ ಹಿಂದಿನ 'ಗಮ್ಮಿ'ಯಲ್ಲಿ ಇಬ್ಬರೂ ಗಳಿಗಳಿಗೆಯ ತನಕ ಮೂಗು ಕೈ ಮಸಿಮಾಡಿಕೊಂಡು ಒಬ್ಬರ ಮುಖ ನೋಡಿ ಇನ್ನೊಬ್ಬರು ಅಸಹ್ಯ ಪಟ್ಟು ಪಾತ್ರೆಯನ್ನು ಹೂಯಿಗೆ ಹಾಕಿ ಸಿಟ್ಟಿನಿಂದ ಸವೆಯುತ್ತಾ ಕುಳಿತಾರೆಯೇ ವಿನಃ ಏನೂ ಎಂತಹದು ಎಂದು ಬಾಯಿ ತೆರೆಯಲಿಕ್ಕೆ ಇಲ್ಲ" ಎನ್ನುವ ಮಾತಿನಲ್ಲಿರುವ ನಗೆಯ ಬಗೆಯನ್ನು ನೋಡಿರಿ. ನಗುವ ಸನ್ನಿವೇಶದಲ್ಲಿಯೂ ನಗದಿರುವ ಆ ಹೆಂಗಳೆಯರನ್ನು ಕಂಡು ನಾವು ನಗುತ್ತೇವೆ. ಸುಶಿಕ್ಷಿತರ ಅಭಿರುಚಿಗೆ ಬೇಕಾದ ಹಾಸ್ಯವನ್ನು ನೀಡುವಲ್ಲಿ ಕಾರಂತರಿಗೆ ಸರಿಸಮಾನರಾದವರು ವಿರಳವೆಂದೇ ಹೇಳಬೇಕು.

ಕಥೆಗಳಲ್ಲಿ ಹಾಸ್ಯವನ್ನೇ ಪ್ರಧಾನವಾಗಿ ತಂದವರಲ್ಲಿ ಗೊರೂರು ಅವರಿಗೆ ಅಗ್ರಸ್ಥಾನ ದೊರೆಯುತ್ತದೆ. ಅವರು ಬರೆದ 'ಶಿವರಾತ್ರಿ' ಕಥಾಸಂಗ್ರಹವನ್ನು ಓದಿ ನಗದವರು ಇಲ್ಲವೆನ್ನಬಹುದು. ಪರರಿಗೆ ನೋವುನ್ನುಂಟು ಮಾಡದ ಹಾಸ್ಯವು ಅವರ ಕಥೆಗಳಲ್ಲಿ ತೆರೆ ತೆರೆಯಾಗಿ ಬರುತ್ತದೆ. ಒಮ್ಮೊಮ್ಮೆ ಹೊನಲಾಗಿ ಹರಿಯುತ್ತದೆ. ಉದಾ:- ಅವರ "ಹಾರುವಯ್ಯಾ ಹಜಾಮನಾದುದು"ಎನ್ನುವ ಕಥೆಯಲ್ಲಿ

ಮಲ್ಲಿಗೆಹಳ್ಳಿಯಲ್ಲಿ ಹಾರುವರಿಗಾಗಿಯೇ ಒಬ್ಬ ಹಜಾಮನಿದ್ದಾನೆ ಅವನು ಅವರ ಕಾಟ ತಾಳಲಾರದೆ ಓಡಿಹೋಗುತ್ತಾನೆ. ಉಳಿದ ಹಜಾಮರು ಬರಲು ಒಪ್ಪುವುದಿಲ್ಲ. ಬ್ರಾಹ್ಮಣರ ತಲೆ ಮುಖಗಳಲ್ಲಿ ಕೂದಲು ಹುಲ್ಲು ಬೆಳೆದಂತೆ ಬೆಳೆಯುತ್ತದೆ. ಆಗ ನರಸಿಂಹಾಚಾರ್ಯರೇ ಹಜಾಮರಾಗಿ ಕಾಯ್ಮೋಖರಾಗುತ್ತಾರೆ. ಆಚಾರ್ಯರು ಒಂದು ದಿನ ಒಬ್ಬ ವಿಧವೆಯ ತಲೆ ಬೋಳುಮಾಡುತ್ತಾ ಕುಳಿತಾಗ ಬಸ್ಸಿನಿಂದಿಳಿದು ಮಾವ, ಹೆಂಡತಿ ಊರಿಗೆ ಹೋದವರು ತಿರುಗಿಬರುತ್ತಾರೆ. ಆಚಾರ್ಯರಿಗೆ ಅವಮಾನವೆನಿಸಿ ಕೆಲಸವನ್ನು ಅಲ್ಲಿಗೆ ನಿಲ್ಲಿಸಿ ಕಪಿಯಂತೆ ಮರವನ್ನೇರುತ್ತಾರೆ. ಗಿಡದ ತುತ್ತತುದಿಯಲ್ಲಿ ಕುಳಿತು 'ನನ್ನ ನೋಡಬೇಡಿ ಎಂದು ತನ್ನ ಹೆಂಡತಿಗೆ ಕಣ್ಸನ್ನೆ ಮಾಡುತ್ತಾರೆ. ಅದು ಅವಳಿಗೆ ತಿಳಿಯುವುದಿಲ್ಲ. ನಿರ್ವಾಹವಿಲ್ಲದೇ ಮರದಿಂದ ಇಳಿದು ಹೆಂಡತಿ ಮಾವರೊಡನೆ ಮನೆಗೆ ಹೊರಡುತ್ತಾರೆ. ಆಗ ಆ ವಿಧವೆ "ಕ್ಷೌರಪೂರ್ಣ ಮಾಡಿ ಹೋಗು" ಎಂದು ಆಚಾರ್ಯರ ದೂತರವನ್ನೇ ಹಿಡಿದೆಳೆಯುತ್ತಾಳೆ. ಎಲ್ಲರೂ ಪೇಚಾಟಕ್ಕೆ ಹಿಡಿಯುತ್ತದೆ. ಕಡೆಗೆ ಅವಳ ಕ್ಷೌರ ಪೂರ್ತಿ ಮಾಡಿ ನದಿಯಲ್ಲಿ ಮಿಂದು ಮನೆಗೆ ಹೋಗುತ್ತಾರೆ. ಕೆಲಸದಿಂದ ನಿವೃತ್ತಿಯಾದರೂ ಹಾರುವಯ್ಯನಿಗೆ ಹಜಾಮನೆಂಬ ಬಿರುದು ತಪ್ಪುವುದಿಲ್ಲ. ಈ ಕತೆಯಲ್ಲಿ ಬಂದಿರುವ ಹಾಸ್ಯದ ಹದವನ್ನು, ಹರವನ್ನು ಗೊರೂರು ಇನ್ನುಳಿದ ಕತೆಗಳಲ್ಲಿ ಕಾಣುತ್ತೇವೆ.

"ಹಾಸ್ಯ ಗೂರೂರ ಜೀವನದಲ್ಲಿ ಹಾಸುಹೊಕ್ಕಾಗಿ ಬಂದದ್ದು. ಸ್ವಾಭಾವಿಕದಿಂದ ಹಾಸ್ಯವನ್ನು ಅವರ ನಡೆನುಡಿಯಲ್ಲಿ ಕಾಣುತ್ತೇವೆ. ಅವರ ಲೇಖನಗಳಲ್ಲಿ ಹಾಸ್ಯ ತಾನಾಗಿ ಹರಿದುಬರುತ್ತದೆ. ಉದಾ:- ಅವರ 'ಮಲ್ಲಿಗೆಯ ಹಳ್ಳಿಯ ಬಯಲಾಟ'ದಲ್ಲಿ ಹಳ್ಳಿಯವರು ರಾಮಾಯಣ ಆಡಿದಾಗ ಆಗುವ ಅನಾಹುತ ಅವ್ಯವಸ್ಥೆಯ ಸನ್ನಿವೇಶಗಳ ಅಸಂಬದ್ಧತೆ ಇವುಗಳನ್ನು ಓದಿಯೇ ಅನುಭವಿಸಬೇಕು. ಮಾದನು ರಾಮನ ಪಾತ್ರವನ್ನು ವಹಿಸಿಕೊಂಡಿದ್ದರೂ, ಹನುಮಂತನ ಆವೇಶವನ್ನು ತಂದುಕೊಂಡು ರಬ್ಬರ್ ಚೆಂಡು ಪುಟವಿಟ್ಟಂತೆ 'ಧೀಂತಕಧೀಂ' ಎಂದು ಕುಣಿದಾಡಿ, ಪ್ರೇಕ್ಷಕರನ್ನು ಮೂಕರನ್ನಾಗಿಸಿದ ಬಗೆ ಓದುಗರ ಮನಸ್ಸಿನಲ್ಲಿ ಹಾಸ್ಯದ ತೆರೆಗಳನ್ನು ಎಬ್ಬಿಸುತ್ತದೆ. ಅನಂತಚಾರ್ಯರ ಆಂಜನೇಯ ಪಾತ್ರದಿಂದ ಆದ ಅಭಾಸ ಮುಂತಾದ ಸಂಗತಿಗಳನ್ನು ಗೂರೂರು ಹಾಸ್ಯವತ್ತಾಗಿ ಹೇಳಿರುವುದು ಮನಮುಟ್ಟುತ್ತದೆ"[3]

ಗೂರೂರು ಅಂದಿನ ಸಮಾಜದ ಸನ್ನಿವೇಶಗಳನ್ನು, ಘಟನೆಗಳನ್ನು ಅನುಭವಗಳನ್ನು ನವಿರಾದ ಹಾಸ್ಯದ ಮರೆಯಲ್ಲಿ ನಮ್ಮ ಮುಂದಿಡುತ್ತಾರೆ. ಅವರ ಹಾಸ್ಯ ಓದಿ ನಕ್ಕು, ನಲಿದುದಲ್ಲದೆ ಮೇಲೆ ಮೇಲೆ ಮೆಲುಕಾಡುವಂತಹ ಹಾಸ್ಯ. ಅವರ ಹಾಸ್ಯಕ್ಕೊಂದು ವಿಶಿಷ್ಟವಾದ ಕೈಚಳಕವಿದೆ. ನಗುವಿನ ಅಲೆಯೊಂದಿಗೆ ತೇಲುತ್ತಾ ಮುಳುಗುತ್ತಾ ಹಾಸ್ಯದ ಮಡುವಿನಲ್ಲಿ ಮುಳುಗೆದ್ದು ಬರುವ ಹೊಸ ಅನುಭವವಾಗುತ್ತದೆ.

ಈ ಎಲ್ಲಾ ಸಾಹಿತ್ಯ ಮುತ್ತುಗಳ ಮಾರ್ಗದಲ್ಲಿ ನಡೆದ ತೇಜಸ್ವಿ ನವ್ಯ ಮಾರ್ಗದಲ್ಲಿ ಬಂದಂತವರು. ಅವರ ಎಲ್ಲಾ ಕತೆ, ಕಾದಂಬರಿಗಳಲ್ಲಿ ಹಾಸ್ಯ ಪ್ರಸಂಗಗಳನ್ನು ನಾವು ಕಾಣಬಹುದು. ಮುಖ್ಯವಾಗಿ ಅವರ ಕತೆಗಳಲ್ಲಿ ಹಾಸ್ಯ ವಿಭಿನ್ನವಾಗಿ ಮೂಡಿಬಂದಿದೆ. "ಕಾವ್ಯಮಯ ಹಾಸ್ಯಪ್ರಜ್ಞೆ

ಸಂದರ್ಭದ ಪೂರ್ಣ ಅರ್ಥವಂತಿಕೆಯನ್ನು ಅರಿಯಬಲ್ಲ ಎಚ್ಚರ ಮತ್ತು ಕತೆ ಹೇಳುವ ನಿರರ್ಗಳತೆ ಹಾಗೂ ಹೊಚ್ಚ ಹೊಸ ವಿಧಾನ ಇವೆಲ್ಲ ತೇಜಸ್ವಿಯವರ ವೈಶಿಷ್ಟ್ಯಗಳಾಗಿವೆ"[೩] ಎನ್ನುವ ವಿಮರ್ಶಕರ ಮಾತು ಉಲ್ಲೇಖನೀಯ. ಅವರ ಕತೆಗಳನ್ನು ಗಮನಿಸಿದಾಗ ನಮಗೆ ಸಹಜ ಪಾತ್ರಗಳ ಮೂಲಕ ಅವರು ಹಾಸ್ಯವನ್ನು ತಂದಿರುವುದು. ಒಂದೊಂದು ಸಲ ಅವರೆ ಹಾಸ್ಯವನ್ನು ಪ್ರತಿಬಿಂಬಿಸುವುದು ಹಾಗೂ ಕೆಲವೊಂದು ಸಲ ತಾವು ಬಳಸುವ ಭಾಷೆಯಲ್ಲಿಯೇ ಹಾಸ್ಯವನ್ನು ಅಳವಡಿಸಿ ಓದುಗರನ್ನು ನಕ್ಕಿ ನಗಿಸುವುದನ್ನು ಕಾಣಬಹುದಾಗಿದೆ. ಮೊದಲಿಗೆ ಅವರ 'ಪಾಕಕ್ರಾಂತಿ ಮತ್ತು ಇತರ ಕತೆಗಳು' ಕಥಾ ಸಂಕಲನದ ಮೊದಲ ಕತೆಯಲ್ಲಿ ಹೆಂಗಸರಿಗೂ ಅಡಿಗೆಗೂ ಇರುವ ಅವಿನಾಭಾವ ಸಂಬಂಧವನ್ನು ಹಾಗೂ ಅಡಿಗೆ ಮಾಡಲು ಹೋಗಿ ತಾವು ಪಟ್ಟಂತಹ ಅವಸ್ಥೆಯನ್ನು ಪಾಕಕ್ರಾಂತಿಯ ಕತೆಯನ್ನು ಓದಿದಾಗ ಹಾಸ್ಯದ ಹೊನಲು ಹರಿಯುತ್ತದೆ.

ತಮ್ಮ ಹೆಂಡತಿ ಊರಿಗೆ ಹೋದಾಗ ಮೊದಲಾಗುವ ಅವರ ಅಡಿಗೆ ಸಂಶೋಧನೆ ಹಾಲನ್ನು ಕಾಯಿಸುವ ಮೂಲಕ ಉದ್ಘಾಟನೆಯಾಗುತ್ತದೆ. ಹಾಲು ಉಕ್ಕಿ ಸ್ಟೌವ್ ಹಾಳಾಗಿ ಹೋದಾಗ ಅವರು ಹೇಳುವ ಮಾತುಗಳು ಓದುಗರ ಮನಸ್ಸಿನಲ್ಲಿ ಹಾಸ್ಯವನ್ನು ಸ್ಫುರಿಸುತ್ತದೆ. "ಹಾಲು ನನಗೆ ರೇಡಿಯೋ ವಿಕಿರಣ ಸೂಸುವ ಯೂರೇನಿಯಂಗಿಂತ ಅಪಾಯಕಾರಿ ವಸ್ತುವಿನಂತೆ ಕಂಡಿತು. ನನ್ನ ಸಂಶೋಧನೆಯಲ್ಲೇ ನಾನು ಕಂಡುಕೊಂಡ ಮೊದಲ ಸತ್ಯ ಎಂದರೆ ಹಾಲು ಅತ್ಯಂತ ಅಪಾಯಕಾರಿ ವಸ್ತು ಎನ್ನುವುದು. ಸಿಗರೇಟು ಮದ್ಯ ಮುಂತಾದವುಗಳ ಮೇಲೆ ಸರ್ಕಾರದವರು ಎಚ್ಚರಿಕೆ ಚೀಟಿ ಅಚಿಟಿಸುವಂತೆ ಹಾಲಿನ ಪ್ಯಾಕೆಟ್‌ಗಳ ಮೇಲೂ ತಲೆ ಬುರುಡೆಯ ಚಿತ್ರವನ್ನು ಹ್ಯಾಂಡಲ್ ವಿತ್ ಕೇರ್ ಎನ್ನುವ ಸೂಚನೆಗಳನ್ನು ಕೊಡುವುದು ಒಳ್ಳೆಯದಲ್ಲವೇ? ಇನ್ನು ಮೇಲೆ ಹಾಲನ್ನು ಅಡಿಗೆಮನೆಯಿಂದಲೇ ಉಚ್ಚಾಟಿಸಬೇಕೆಂದು ಅನಿಸಿದರೂ ಹೆಂಗಸರು ತಮ್ಮ ಸಂಪ್ರದಾಯ ಬಿಡುವುದು ಕಷ್ಟ ಎಂದೆನಿಸಿದ್ದರಿಂದ ಹೆಂಡತಿ ಬರುವವರೆಗಾದರೂ ಹಾಲನ್ನು ದೂರ ಇಡೋಣವೆಂದು ಹಾಲಿನವನಿಗೆ ನಾನು ಮತ್ತೇ ಹೇಳುವವರಿಗೂ ಕೊಡುವುದು ಬೇಡವೆಂದು ಹೇಳಿದೆ"[೪] ಇಂತಹ ತಿಳಿ ಹಾಸ್ಯ ಅವರ ಕತೆಗಳಲ್ಲಿ ನಾವು ಅಲ್ಲಲ್ಲಿ ಕಾಣಬಹುದು.

ತನ್ನ ವಿಜ್ಞಾನಿ ಮಿತ್ರನಿಗೂ ಇವರಿಗೂ ನಡೆಯುವ ಸಂಭಾಷಣೆ ನಮಗೆ ನವಿರಾದ ಹಾಸ್ಯವನ್ನು ನೀಡುತ್ತದೆ. "ನಾನು ಅಡಿಗೆಯನ್ನು ಕಲೆ ಎಂದು ಹೇಳಿದಾಗ ನನ್ನ ಸ್ನೇಹಿತ ಕಲೆ ಇರೋದೆ ಮೋಸ, ವಂಚನೆ ಮಾಡೊದಕ್ಕೆ ಈವನ್ ಸಾಹಿತ್ಯಾನೆ ತಗೋ ಚಂದ್ರವದನೆ ಅನ್ನೋದು ಹೆಂಗಸಿನ ಕಣ್ಣನ್ನ ಮೀನುಗಳಿಗೆ ಹೋಲಿಸೋದು ಚಂದ್ರನ ಬೆಳಕು ತಣ್ಣಗಿರುತ್ತೇ ಅದೊಂದು ಪ್ಯೂರ್ ಚೀಟಿಂಗ್. ನೀನು ನಿಜವಾಗಿಯೂ ಅಡಿಗೆ ಮನೆಯಲ್ಲಿ ಕ್ರಾಂತಿಕಾರಕ ಬದಲಾವಣೆ ಮಾಡಬೇಕೆಂದಿದ್ದರೆ ಸೈಂಟಿಫಿಕ್ಕಾಗಿ ಇರಬೇಕು" ಎಂದು ಅಡಿಗೆ ಕಲೆ ಎನ್ನುವ ಕಲ್ಪನೆಯನ್ನು ಸಾರಸಗಟಾಗಿ ತಿರಸ್ಕರಿಸಿ ಇಡೀ ಕಲಾಪ್ರಪಂಚವನ್ನೇ ಮೋಸ ವಂಚನೆಗಳ ಉದ್ದೇಶದಿಂದ ಹುಟ್ಟಿದೆಂದು ಹೇಳಿದ. ಹೀಗೆ ಸಾಗುತ್ತಾ

ಹೋಗುವ ಅವರ ಕತೆ ಕೊನೆಗೆ ಪ್ರೆಷರ್ ಕುಕ್ಕರ್, ಸಿಡಿಯುವುದಕ್ಕೂ ಅಲ್ಲಿಗೆ ಬರುವ ಪೋಲಿಸರು ಅವರನ್ನು ನಕ್ಸಲೈಟ್ ಎಂದು ಮನೆಯಲ್ಲಿ ಬಾಂಬ್ ಇಟ್ಟಿದ್ದಾರೆಂದು ಹೇಳಿ ಸಂಶಯ ಪಡುವ ಸನ್ನಿವೇಶ ಅದನ್ನು ಸುಳ್ಳೆಂದು ಸಮರ್ಥಿಸಿಕೊಳ್ಳುವಲ್ಲಿ ಲೇಖಕರು ಪಡುವ ಪಾಡು ಹಾಗೆಯೇ ಅದನ್ನು ಪರೀಕ್ಷಿಸಲು ಹೋದ ಪೋಲಿಸ್ ಅವಸ್ಥೆ ನಿರೂಪಕನ ಭಾಷ ವೈಖರಿಯಿಂದಲೇ ಹಾಸ್ಯದ ಹೊನಲನ್ನು ಹರಿಸುತ್ತದೆ.

ಮೈಗಾಡ್ ಇದು ಸಿಂಪಲ್ ಕುಕ್ಕಿಂಗ್ ಆಕ್ಸಿಡೆಂಟ್ ತಡೀರಿ, ತಡೀರಿ ಮೊದಲು ಸ್ವಿಚ್ ಆಫ್ ಮಾಡುತ್ತೇನೆ ಎಂದ ಒಬ್ಬ ಪೋಲಿಸ್ ಅಧಿಕಾರಿಯ ಮೇಲೆ ನೋಡುತ್ತಾ ಅಡುಗೆಮನೆಯೊಳಗೆ ಒಂದು ಹೆಜ್ಜೆ ಇಟ್ಟ. ದುರ್ದೈವ ಅಲುಗಡ್ಡೆಯ ಅರೆಬೆಂದ ಹೋಳಿನ ಮೇಲೆ ಕಾಲೂರಿದ ಆತ ಜಾರಿ ಧಡೀರೆಂದು ನೆಲದ ಮೇಲಿದ್ದ ತಿಳಿಸಾರು, ಅನ್ನದ ಗಂಜಿಯ ಕೊಚ್ಚೆಯ ಮೇಲೆ ಬಿದ್ದ. ಬಿದ್ದ ಪೋಲಿಸ್ ಅಧಿಕಾರಿಯನ್ನು ಎತ್ತಿ ನಿಲ್ಲಿಸಿದಾಗ ಆತನ ಉಡುಪಿನ ಒದ್ದೆ ಭಾಗದಿಂದ ಕೆಂಪು ದ್ರವ ಬಿದ್ದಿದನ್ನು ನೋಡಿ ಇನ್ನೊಬ್ಬಾತ "ಬ್ಲೀಡಿಂಗ್ ಬ್ಲೀಡಿಂಗ್" ಎಂದು ಕೂಗಿದ ನಾನು ಇರುವೆ ಓಡಿಸಲು ಅಡುಗೆಮನೆ ನೆಲಕ್ಕೆ ಡೀಸೆಲ್ ಸುರಿದು ನೆಲದ ರೆಡ್ ಆಕ್ಸೈಡ್ ಪಾಲಿಶ್ ಕರಗಿ ಸಾರಿನ ಜೊತೆ ಬೆರೆತು ಕೆಂಪಾಗಿ ಇಳಿಯುತ್ತಿತ್ತಷ್ಟೇ. ನಾನು "ಬ್ಲೀಡಿಂಗ್ ಅಲ್ಲ ಪ್ಲೋರ್ ಪಾಲಿಶ್ ಅದು"ಎಂದು ಹೇಳಿದಾಗ ಆತ ಮತ್ತೊಮ್ಮೆ ಆರ್ ಯು ಷೂರ್? ಎಂದು ಕೇಳಿದ. ಇಂತಹ ಸರಳ ಭಾಷೆಯ ಮೂಲಕ ಗಂಭೀರ ಪಾತ್ರಗಳ ಮೂಲಕವು ಹಾಸ್ಯವನ್ನು ತರುವ ತೇಜಸ್ವಿ ಅವರ ಹಾಸ್ಯಪ್ರಜ್ಞೆಯ ವೈಶಿಷ್ಟವೆಂದೇ ಹೇಳಬೇಕು.

ತೇಜಸ್ವಿಯವರದು ಒಂದು ರೀತಿಯ ಕುಚೇಷ್ಟೆಯ ವಿಡಂಬನಾತ್ಮಕ ಹಾಸ್ಯಪ್ರಜ್ಞೆ, ಅಂದರೆ ಇವರು ಹಾಸ್ಯದ ಕ್ರಮವನ್ನು ತಮ್ಮಕಾಲಕ್ಕೆ ತಕ್ಕಂತೆ ಬದಲಿಸಿಕೊಂಡಿದ್ದಾರೆನ್ನಬಹುದು. ಆದರೆ ನಮ್ಮ ಇತರೆ ಸಾಹಿತಿಗಳು ಹಾಸ್ಯವನ್ನು ಸ್ಪುರಿಸುವ ರೀತಿಗೂ ಭಿನ್ನವಾಗಿದೆ. ಉದಾಹರಣೆಗೆ ಶ್ರೀನಿವಾಸರ 'ನಮ್ಮಮೇಷ್ಟ್ರು' ಕತೆಯಲ್ಲಿ ನಗುವುದರ ಜೊತೆಗೆ ಶಿಕ್ಷಕನ ಬಡಬಾಳಿಗೆ ಮರುಕ ಪಡುತ್ತೇವೆ. ಹಾಗೆಯೇ ಕಾರಂತರ ಹಾಸ್ಯವು ವ್ಯಕ್ತಿಗಳಲ್ಲಿರುವ ದುರಾಭಿಮಾನ, ಕುರೂಪತನ ಸ್ವಭಾವದ ಡೊಂಕು ನಗೆಗೆ ಕಾರಣವಾಗಿಬಿಡುತ್ತದೆ.

ತೇಜಸ್ವಿಯವರ ಹಾಸ್ಯವು ಇದನ್ನು ಹೋಲುತ್ತದೆಯಾದರೂ ಇವರ ವೈಚಾರಿಕ ನಿಲುವಿನೆಡೆಗೆ ಹೆಚ್ಚು ಗಮನವನ್ನು ಕೊಡುತ್ತಾರಷ್ಟೆ. ಹಾಗೆಯೇ ಕಾರಂತರ ಹಾಸ್ಯವು ವ್ಯಕ್ತಿಗಳಲ್ಲಿರುವ ಕೊಳೆಯನ್ನು ತೊಳೆಯುವ ನಿರ್ಮಲ ಗಂಗೆಯಂತೆ ಕಥೆಗಳುದ್ದಕ್ಕೂ ಹರಿದುಬಂದಿದೆ. ತೇಜಸ್ವಿಯವರಲ್ಲೂ ಮುಖ್ಯವಾಗಿ ಹಾಸ್ಯದ ಮೂಲಕ ಆ ವ್ಯಕ್ತಿಯ ಸ್ವಾಭಾವಿಕತೆಯನ್ನು ಪ್ರತಿಬಿಂಬಿಸುತ್ತದೆ. ಉದಾಹರಣೆಗೆ ಪಾಕಕ್ರಾಂತಿಯಲ್ಲಿ ಅವರ ವಿಜ್ಞಾನಿ ಸ್ನೇಹಿತನ ಮಾತುಗಳು ಓದುಗರಿಗೆ ಹಾಸ್ಯಾಸ್ಪದವಾಗಿ ಕಂಡರೂ ಮೂಲತಃ ತೇಜಸ್ವಿಯವರು ಅವರ ಬಗ್ಗೆ ಹೇಳುವ ಮಾತುಗಳು ಅವನ ಸ್ವಭಾವವನ್ನು ಹೇಳುತ್ತದೆ. ಇನ್ನು ಹಾಸ್ಯ ಬರಹಗಾರರಾಗಿರುವ ಗೂರೂರು ಹಾಸ್ಯದ ಮೂಲಕವೇ ಪಾತ್ರಗಳ ವಿಶಿಷ್ಟತೆಯನ್ನು ಹೇಳಿದರೆ ತೇಜಸ್ವಿಯವರು ಆ ಪಾತ್ರಗಳ ಮೂಲಕ ಹಾಸ್ಯದ ವಿಶಿಷ್ಟತೆಯನ್ನು ಹೇಳುತ್ತಾರೆ. ಉದಾಹರಣೆಗೆ ಕುಕ್ಕುಟ

ಪಿಶಾಚ ಕತೆಯಲ್ಲಿ ಮಾರ ತನಗಾದ ಅನುಭವವನ್ನು ಹೇಳುವುದು ಅದು ಒಂದು ಮೂಢ ನಂಬಿಕೆ ಯಾದರೂ ಅದನ್ನು ವಿಡಂಬನಾತ್ಮಕವಾಗಿ ನಿರೂಪಕರು ಹೇಳುವುದು. ಹಾಗೆಯೇ ಅವರ ಸಂಭಾಷಣಾ ವೈಖರಿ ನಮಗೆ ವಿಷಯ ಗಂಭೀರವಾದರೂ ಹಾಸ್ಯಹೊನಲಾಗಿ ಹರಿಯುತ್ತದೆ. ತೇಜಸ್ವಿಯವರಲ್ಲಿ ವೈಚಾರಿಕತೆಯಲ್ಲೂ ಹಾಸ್ಯವನ್ನು ತರುವುದು ಅವರ ಹಾಸ್ಯಪ್ರಜ್ಞೆಗೆ ಹಿಡಿದ ಕನ್ನಡಿ. ಅವರ "ಪಂಜ್ರೊಳ್ಳಿ ಪಿಶಾಚಿಯ ಸವಾಲು" ಕತೆಯಲ್ಲಿ ಇಬ್ಬರು ಸ್ನೇಹಿತರು ಶಾಮಣ್ಣ ಮತ್ತು ನಿರೂಪಕರ ಮುಖಾಂತರ ತೆರೆದುಕೊಳ್ಳುತ್ತದೆ. ಕಾಫಿ ಕದಿಯಲೆಂದು ಹಾಸ್ಟೆಲ್‌ನಿಂದ ಹೊರಬಿದ್ದ ನಿರೂಪಕ ಹಾಗೂ ಅವರ ಸ್ನೇಹಿತ ನಿರೂಪಕನ ಮನೆಯಲ್ಲಿ ಯಾವಾಗಲೂ ಮಡಿ ಎನ್ನುವ ಅಜ್ಜಿ, ಅವಳ ಕಣ್ಣಿಗೆ ಕಾಣದಂತೆ ಅವರ ಮನೆಯ ಕೆಲಸದಾಳು ಉದಿನನ ಮುಖಾಂತರ ನಿರೂಪಕನ ಮನೆಯಲ್ಲಿ ಕಾಫಿ ಕದಿಯಲು ಬರುತ್ತಾರೆ. ಆಗ ನಿರೂಪಕ ಮೆಲ್ಲನೆ ಎಬ್ಬಿಸಲು ಯತ್ನಿಸಿದಾಗ ನಡೆಯುವ ಪ್ರಸಂಗ ಓದುಗರಲ್ಲಿ ನಗೆಯನ್ನು ತರುತ್ತದೆ.

"ಕೆಲಸಕೆಟ್ಟಿತು, ಯಾವುದು ಆಗಬಾರದೆಂದಿದ್ದನೋ ಅದೇ ಆಯ್ತು ಉದಿನ ಬೆಚ್ಚಿ ಹೌಹಾರಿ ಆಹ ಹ ಹ ಹೊ ಹೊ! ಎಂದು ಒದರುತ್ತಾ ಕೈಕಾಲು ಝಾಡಿಸಿ ಎದ್ದುಕುಳಿತ. ಪಾತ್ರೆಯಲ್ಲಿ ಎಂಥದ್ದೊ ಧಡ್ಡನೆ ಬಿದ್ದು ಗುರುಗುಟ್ಟುತ್ತಾ ತಗ್ಗಿನ ಕಡೆಗೆ ಉರುಳಿಕೊಂಡು ಹೋಯ್ತು. ನಮ್ಮಜ್ಜಿ ನಿದ್ದೆಯಿಂದ ಎದ್ದು ಲೋ ಏನೋ ಅದು ಉದಿನ ಎಂದು ಕೂಗಿದರು.

**ಶ್ಯೂ ಬೆಕ್ಕೊ 'ಅನ್ನೋ' ಎಂದೆ ನಾನು**

**ಆ ಏನೋ' ಎಂದು ಕೇಳಿದ ಉದಿನ**

**ಬೆಕ್ಕೊ ಅನ್ನೋ**

**ಸೊಕ್ಕು ಕಣ್ರವ್ವಾ**

**ಸೊಕ್ಕಲ್ವೊ ಬೆಕ್ಕು ಅನ್ನೊ ಎಂದೆ**

**ಬೆಕ್ಕು ಕಣ್ರವ್ವಾ ಎಂದ**

ಎಂತದೊ ಅದು ಬೆಕ್ಕು ಸೊಕ್ಕೊ ಎಂದು ನಮ್ಮಜ್ಜಿ ಮಲಗಿಂದಲ್ಲಿಯೇ ಕೂಗಿದರು. ಈ ಸಂಭಾಷಣೆಯಲ್ಲಿ ಪ್ರತಿಯೊಂದು ಸನ್ನಿವೇಶ ಓದುಗರಲ್ಲಿ ಕುತೂಹಲದ ಜೊತೆಗೆ ಹಾಸ್ಯ ತರುತ್ತದೆ. ಕೊನೆಯಲ್ಲಿ ನಿರೂಪಕ ತಮ್ಮ ಮನೆಯಲ್ಲಿದ್ದ ಡಬ್ಬಿಯಲ್ಲಿ ಕಾಫಿ ಕದ್ದು ಹಾಸ್ಟೆಲ್‌ಗೆ ಹೋಗಿ ಕುಡಿಯುವುದು ನಂತರ ಡಬ್ಬವನ್ನು ಹುಡುಕುವ ಸಂದರ್ಭ ಬಂದಾಗ ಉದಿನ ನಿಜ ಹೇಳದ ಬಾವಿಯಲ್ಲಿ ಬಿದ್ಹೋಯ್ತು ಎಂದಾಗ ಅಜ್ಜಿ ಬಾವಿಯನ್ನು ಶುದ್ಧಿಕರಿಸಿ ಏಕೆಂದರೆ ಅದು ಆಳುಗಳು ಕಕ್ಕಸ್ಸಿಗೆ ನೀರು ತೆಗೆದುಕೊಂಡು ಹೋಗಲು ಇಟ್ಟಿದ್ದು ಎಂದಾಗ ಕಾಫಿ ಚೆನ್ನಾಗಿದೆ ಎಂದು ಹೇಳಿದವರೆಲ್ಲ ವಾಕರಿಕೆ ಬಂದು ಉಗಿಯುವುದು. ಅಜ್ಜಿ ವಿಜಯೋತ್ಸಾಹದಿಂದ ಇದು ಪಂಜ್ರೊಳ್ಳಿ ಪಿಶಾಚಿಯ ಪವಾಡ ಎಂದು ಹೇಳುವುದು ಓದುಗರಿಗೆ ವೈಚಾರಿಕತೆಯ ಜೊತೆಗೆ ಹಾಸ್ಯವನ್ನು ಕಟ್ಟಿಕೊಡುತ್ತದೆ.

ತೇಜಸ್ವಿಯವರು ಮೂಲತಃ ಹಾಸ್ಯ ಬರಹಗಾರರಲ್ಲದಿದ್ದರೂ ಅವರು ಎಲ್ಲಾ ಕತೆಗಳಲ್ಲೂ ನಾವು ಹಾಸ್ಯವನ್ನು ಕಾಣಬಹುದು. ಅವರು ಅದನ್ನು ವ್ಯಂಗ್ಯವಾಗಿ ವಿಡಂಬನಾತ್ಮಕವಾಗಿ ಬಳಸಿಕೊಂಡಿರುವುದು ಅವರ ಹಾಸ್ಯಪ್ರಜ್ಞೆಯ ವೈಖರಿಯೆಂದೇ ಹೇಳಬೇಕು. ಒಟ್ಟಾರೆ ಈ ಅಧ್ಯಾಯವು ಇತರೆ ಲೇಖಕರಂತೆ ತೇಜಸ್ವಿಯವರ ಹಾಸ್ಯಪ್ರಜ್ಞೆಯನ್ನು ಯಾವ ರೀತಿ ಬಳಸಿಕೊಂಡಿದ್ದಾರೆ, ಅವರ ಹಾಸ್ಯದ ರೀತಿಗೂ ಇರುವ ಹಾಸ್ಯ ವೈಖರಿಗೂ ಇರುವ ವ್ಯತ್ಯಾಸವನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

# ಅಡಿ ಟಿಪ್ಪಣಿ

೧. ಸುಂಕಾಪುರ. ಎಸ್. : ಕನ್ನಡ ಸಾಹಿತ್ಯದಲ್ಲಿ ಹಾಸ್ಯ, ಪುಟ–೨೯೮

೨. ಸುಂಕಾಪುರ. ಎಸ್. : ಕನ್ನಡ ಸಾಹಿತ್ಯದಲ್ಲಿ ಹಾಸ್ಯ, ಪುಟ–೩೦೨

೩. ಎಚ್.ಕೆ.ನಂಜುಂಡಸ್ವಾಮಿ : ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಾಸ್ಯ, ಪುಟ–೧೦೪

೪. ಪೂರ್ಣಚಂದ್ರ ತೇಜಸ್ವಿ : ಪಾಕಕ್ರಾಂತಿ, ಪುಟ–೪

೫. ಆರ್.ವೆಂಕಟೇಶ ಇಂದ್ವಾಡಿ : ಪೂರ್ಣಚಂದ್ರತೇಜಸ್ವಿ, ಪುಟ–೪

## ಅಧ್ಯಾಯ – ೫

## ತೇಜಸ್ವಿ ಕಥೆಗಳಲ್ಲಿ ಹಾಸ್ಯ ನಿರೂಪಣಾ ತಂತ್ರ ಹಾಗೂ ಬಗೆಗಳು

ಹಾಸ್ಯವು ಜೀವನದಲ್ಲಿ ಮಹತ್ವದ ಸ್ಥಾನವನ್ನು ಪಡೆದಂತೆ ಜಗತ್ತಿನ ಸಾಹಿತ್ಯದಲ್ಲಿಯ ಹಿರಿಯ ಸ್ಥಾನವನ್ನು ಗಳಿಸಿಕೊಂಡಿದೆ. ಆಂಗ್ಲಸಾಹಿತ್ಯವು ಆಧುನಿಕ ಯುಗದಲ್ಲಿ ಹಾಸ್ಯದ ಹಿರಿಮೆಯನ್ನು ಎತ್ತಿ ತೋರುತ್ತದೆ. ಮತ, ಧರ್ಮ, ತತ್ವ ಇವುಗಳ ವಿವೇಚನೆಗೆ ಮಹತ್ವದ ಸ್ಥಾನವನ್ನು ಕೊಟ್ಟ ಭಾರತೀಯರು ತಮ್ಮ ಸಾಹಿತ್ಯದಲ್ಲಿ ಹಾಸ್ಯರಸಕ್ಕೆ ಯೋಗ್ಯಸ್ಥಾನವನ್ನಿಟ್ಟಿಲ್ಲವೆಂಬುದು ಪಾಶ್ಚಾತ್ಯ ವಿಮರ್ಶಕರ ಅಭಿಪ್ರಾಯವಾಗಿದೆ. ಕನ್ನಡ ಸಾಹಿತ್ಯವು ಈ ನಿಯಮಕ್ಕೆ ಅಪವಾದವಾಗಿಲ್ಲವೆಂಬ ಅಭಿಪ್ರಾಯವನ್ನು ವಿಮರ್ಶಕರು ವ್ಯಕ್ತಪಡಿಸುತ್ತಾ ಬಂದಿರುವರು. ಸರ್ವಸಾಮಾನ್ಯವಾಗಿ ಹೇಳುವುದಾದರೆ ಎಲ್ಲ ರಸಗಳಿಗಿಂತಲೂ ಹಾಸ್ಯರಸದಲ್ಲಿ ಜನತೆಗೆ ಹೆಚ್ಚು ಆದರ. ಹಾಸ್ಯದಿಂದೊಡಗೂಡಿದ ಸಾಹಿತ್ಯವನ್ನು ಜನತೆಯು ಪ್ರೀತಿಸುತ್ತದೆ. ಹಾಸ್ಯದ ಹಿರಿಮೆಯನ್ನು ಅ.ನ.ಕೃ. ಹೀಗೆ ಹೇಳಿದ್ದಾರೆ. "ಹಾಸ್ಯವಿಲ್ಲದ ಬಾಳು ದೇವರಿಲ್ಲದ ದೇಗುಲದಂತೆ, ದೀಪ್ತಿಯಿಲ್ಲದ ದೀವಿಗೆಯಂತೆ, ಕಪ್ಪು ಮೋಡ ತುಂಬಿದ ಜೀವನಾಕಾಶದಲ್ಲಿ ಹಾಸ್ಯವು ಬೆಳ್ಳಿಯ ಬೆಳಕು ಬೆಳಗಿದಂತೆ"[1] ಹೀಗೆ ಹಾಸ್ಯವು ನಮ್ಮ ಸಾಹಿತ್ಯದಲ್ಲಿ ತನ್ನದೆ ಆದ ಅಸ್ಥಿತ್ವವನ್ನು ಪಡೆದುಕೊಂಡಿತು.

ಇಂತಹ ಹಾಸ್ಯವನ್ನು ಕೆಲವು ಸಾಹಿತಿಗಳು ಗಂಭೀರವಾಗಿ, ಕೆಲವರು ಹಾಸ್ಯವನ್ನೇ ಪ್ರಮುಖವಾಗಿ ಬಳಸುತ್ತಾ ಬಂದರು. ಇಂತಹವರಲ್ಲಿ ತೇಜಸ್ವಿಯವರು ಹಾಸ್ಯವನ್ನು ಕತೆಗಳಲ್ಲಿ ಸ್ವಾರಸ್ಯಕರವಾಗಿರಲೂ ಹಾಗೂ ತಮ್ಮದೇ ಆದ ನಿಲುವನ್ನು ಒಂದು ವಿಭಿನ್ನ ದೃಷ್ಟಿಕೋನದಲ್ಲಿ ಹಾಸ್ಯರಸವನ್ನು ಬಳಸಿ ಹೇಳಿದ್ದು ಅವರ ಹಾಸ್ಯ ಅಭಿವ್ಯಕ್ತಿಯ ಕ್ರಮ ಎಂದೇ ಹೇಳಬೇಕು. ತೇಜಸ್ವಿ ಒಬ್ಬ ಚಿಕ್ಕ ಹುಡುಗ ಏನಾದರೂ ಮಾತಾಡಲಿ, ತಾಳ್ಮೆಯಿಂದ ಕೇಳುವ ತಪ್ಪು, ಒಪ್ಪುಗಳನ್ನು ನಿಧಾನವಾಗಿ ವಿಮರ್ಶಿಸುವ ಗುಣ ಹೊಂದಿದ್ದರು. ಕುವೆಂಪು ತಮ್ಮ ಕವನಗಳಲ್ಲಿ ಶ್ರೀಸಾಮಾನ್ಯನನ್ನು ನಾಯಕನನ್ನಾಗಿ ಮಾಡಿದರು. ಆದರೆ ಮಹಾಕಾವ್ಯಗಳಲ್ಲಿ ಪುರಾಣಪುರುಷರನ್ನು ಮೆರೆಸಿದ್ದರು. ಆದರೆ ತೇಜಸ್ವಿ ಇಡೀ ಸಮಸ್ತ ಬರಹಗಳಲ್ಲಿ ಸಾಮಾನ್ಯನನ್ನೇ ನಾಯಕನನ್ನಾಗಿ ಚಿತ್ರಿಸಿದರು. ಅವರ ಕತೆಗಳು ಶ್ರೀಸಾಮಾನ್ಯನ ವಿಶಿಷ್ಟ ಪ್ರತಿಭಾಪೂರ್ಣ ಬದುಕನ್ನು ಅನಾವರಣಮಾಡಿ ಕನ್ನಡ ಓದುಗನಿಗೆ ಹೊಸಬೆಳಕುವೊಂದನ್ನು ದರ್ಶನ ಮಾಡಿಸಿದವು.

ಇಪ್ಪತ್ತನೆಯ ಶತಮಾನದ ಕನ್ನಡದ ಮೇರು ಸದೃಶ ಸಾಹಿತಿಗಳಾದ ಕುವೆಂಪು ಮತ್ತು ಶಿವರಾಮಕಾರಂತರ ನಿಜವಾದ ಉತ್ತರಾಧಿಕಾರಿಯಂತೆ ತೇಜಸ್ವಿಯವರು ಇದ್ದರು. ಕುವೆಂಪು ಮತ್ತು ಕಾರಂತರನ್ನು ತಮ್ಮ ಸಾಹಿತ್ಯ ರಚನೆಯ ಪ್ರೇರಕ ಶಕ್ತಿಗಳೆಂದು ಅವರೇ ಅಬಚೂರಿನ ಪೋಸ್ಟಾಫೀಸ್

ಪುಸ್ತಕದ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಕುವೆಂಪುರವರ ಗದ್ಯದ ಕಲಾಭಿವ್ಯಕ್ತಿ ತೇಜಸ್ವಿಯವರಲ್ಲಿ ಸಹಜವಾಗಿಯೇ ಮೂಡಿದೆ. ಕಾಲಧರ್ಮಕ್ಕನುಗುಣವಾಗಿ ಕುವೆಂಪುರವರ ಸಂಸ್ಕೃತಪದ ಪುಂಜಗಳನ್ನು ಹೊರತು ಪಡಿಸಿದ ಮಲೆನಾಡಿನ ಕನ್ನೈತನದ ಭಾಷೆಯಲ್ಲಿ ಅದರ ಎಲ್ಲ ಒರಟುತನದ ಜೊತೆಭಾಷೆಯನ್ನು ದುಡಿಸಿಕೊಂಡಿದ್ದಾರೆ. ಕುವೆಂಪು ಅವರಲ್ಲಿರುವ ಹಾಸ್ಯಪ್ರಜ್ಞೆ ಬದುಕನ್ನು ಅದರ ವಾಸ್ತವ ಸಂಕೀರ್ಣತೆಯ ನಡುವೆಯೇ ನಿರ್ಲಿಪ್ತವಾಗಿ ಸ್ವೀಕರಿಸುವ ಮನಸ್ಥಿತಿಗೆ ಸಿದ್ಧಗೊಳಿಸುವಂತೆ ತೇಜಸ್ವಿಯವರಲ್ಲೂ ಕಾರ್ಯ ನಿರ್ವಹಿಸುತ್ತದೆ.

ತೇಜಸ್ವಿಯವರ ಹಾಸ್ಯ ನಿರೂಪಣಾ ತಂತ್ರ ಒಂದು ರೀತಿಯಲ್ಲಿ ಆ ಸನ್ನಿವೇಶದ ವಿಶಿಷ್ಟತೆಯನ್ನೂ ಹೇಳಲಿಕ್ಕೆ ಹೆಚ್ಚಾಗಿ ಬಳಕೆಯಾಗಿರುವುದನ್ನು ಕಾಣಬಹುದು. ಅವರು ಸರಳ ಹಾಸ್ಯಶೈಲಿಯನ್ನು ಬಳಸಿಕೊಂಡು ವಿಭಿನ್ನಬಗೆಯಲ್ಲಿ ಹಾಸ್ಯವನ್ನು ನಿರೂಪಿಸಿರುವುದು ಅವರ ಹಾಸ್ಯ ನಿರೂಪಣಾ ತಂತ್ರದ ಬಗೆ ಎಂದೇ ಹೇಳಬೇಕು. ಉದಾಹರಣೆಗೆ ಅವರ 'ಮಾನೀಟರ್' ಕತೆಯಲ್ಲಿ ಉಡವನ್ನು ಹಿಡಿಯಲು ಹೋಗಿ ಅದಕ್ಕೆ ಹಗ್ಗ ಹಾಕಿ ನೇತುಬೀಳುವಲ್ಲಿ ಕೃಷ್ಣಪ್ಪ, ಮಾರ, ಪ್ಯಾರನ ಜೊತೆಗೆ ನಿರೂಪಕರು ಸೇರಿ ಉಡಕ್ಕೆ ಕೊಂಬೆಗೆ ಹಗ್ಗಹಾಕಿ ನೇತಾಡುತ್ತಿರಬೇಕಾದರೆ ಕೊಂಬೆಯೇ ಇವರ ಮೇಲೆ ಬಿದ್ದು ಫಜೀತಿಯಾಗಿ ನಂತರ ಅದರಲ್ಲಿರುವ ಇರುವೆಗಳು ಅವರನ್ನು ಕಚ್ಚುತ್ತಿರಬೇಕಾದರೆ ಅವರ ಪಾಡು ಮುಖ್ಯವಾಗಿ ಇದೊಂದು ಸರಳ ಘಟನೆಯಾದರೂ ಅವರು ಅದನ್ನು ತಮ್ಮ ಕತೆಯಲ್ಲಿ ಬಳಸುವ ತಂತ್ರ ಮಾತ್ರ ವಿಭಿನ್ನವೆಂದೇ ಹೇಳಬೇಕು. ಇಲ್ಲಿ ಓದುಗನಿಗೆ ಕುತೂಹಲದ ಜೊತೆಗೆ ಹಾಸ್ಯವನ್ನು ಸೃಷ್ಟಿಸಿರುವ ರೀತಿ ನವ್ಯ ಕಾಲದಲ್ಲಿ ಅವರು ಬಳಸಿಕೊಂಡ ವಿಭಿನ್ನ ಮಾರ್ಗವಾಗಿದೆ. ಹಾಸ್ಯದ ಬಗೆಗಳು ಹಲವಾರು. ಅದನ್ನು ತಮ್ಮ ಕತೆಗೆ ತಕ್ಕಂತೆ ಬಳಸಿಕೊಂಡು ಕತೆಗೆ ಮೆರುಗನ್ನು ನೀಡುವುದು. ಕತೆಗಾರನಿಗೆ ಇರಬೇಕಾದ ತಂತ್ರ ಅದನ್ನು ತೇಜಸ್ವಿಯವರು ತಮ್ಮ ಕತೆಗಳಲ್ಲಿ ಅಚ್ಚುಕಟ್ಟಾಗಿ ಮಾಡಿದ್ದಾರೆ. ಅವರು ಎಲ್ಲೂ ಸಹ ಹಾಸ್ಯವನ್ನು ಬಲವಂತವಾಗಿ ತುರುಕಿಲ್ಲ ಬದಲಿಗೆ ಸಾಮಾನ್ಯವಾಗಿ ಆ ಸನ್ನಿವೇಶಕ್ಕೆ ತಕ್ಕಂತೆ ಹಾಸ್ಯವನ್ನು ತಂದಿದ್ದಾರೆ. ಇದು ಕತೆಗಾರನಿಗಿರಬೇಕಾದ ಜಾಣ್ಮೆ. ಇಂತಹ ಜಾಣ್ಮೆ ಹೊಂದಿರುವ ತೇಜಸ್ವಿಯವರ ಭಾಷೆಯೂ ಅಷ್ಟೇ ಸರಳ, ಸುಂದರ ಹಾಗೂ ಓದುಗರನ್ನು ಬಹಳ ಬೇಗ ತಲಪುತ್ತುದೆ.

**೩.೧. ಹಾಸ್ಯದ ಸ್ವರೂಪ:-**

ಮಡಕೆಯ ಮಾಡುವರೆ ಮಣ್ಣೆ ಮೊದಲು ಎನ್ನುವಂತೆ ಕತೆಯನ್ನೊರೆವಡೆ ಕಥಾವಸ್ತು ಮೊದಲು, ಏನಾದರೂ ಬರೆಯ ಬೇಕೆಂದವನು ಮೊದಲು ವಿಷಯ ಸಾಮಾಗ್ರಿಯನ್ನು ಕಂಡುಕೊಳ್ಳುತ್ತಾನೆ. ಬಳಿಕ ವಿಷಯ ನಿರೂಪಣೆಗಾಗಿ ಬೇಕಾಗುವ ತಕ್ಕ ಶಬ್ದಗಳನ್ನು ಹುಡುಕಿ ತಂದು ತನ್ನ ಬರವಣಿಗೆಯಲ್ಲಿ ಸರಿಯಾಗಿ ಜೋಡಿಸಿಕೊಳ್ಳುತ್ತಾರೆ. ಇಂತಹ ಪದಗಳ ಜೊತೆ ನವರಸಗಳನ್ನು ಸೇರಿಸಿ ಉತ್ತಮ ಕತೆಯಾಗಿಸುವಲ್ಲಿ ಕತೆಗಾರನ ಶ್ರಮ ಅದ್ವಿತೀಯವೆಂದೇ ಹೇಳಬೇಕು. ಮೊದಲಿಗೆ ಹಾಸ್ಯ ಎಂದರೆ

ನಗೆ ಎಂದು ಹೇಳಬಹುದು. ಸಾಹಿತ್ಯದಲ್ಲಿ ಹಾಸ್ಯರಸ ಓದುಗನ ಮನಹೊಕ್ಕು ನಗೆಯಾಗಿ ಹೊರಹೊಮ್ಮುತ್ತದೆ. ಸಾಹಿತ್ಯವು ಜನಾಂಗದ ಜೀವನಾಡಿ, ಸಮಾಜ ಜೀವನದ ಪ್ರತಿಬಿಂಬ. ಪ್ರತಿಭಾವಂತನಾದ ಕವಿಯು ಲೌಕಿಕ ಜೀವನವನ್ನೇ ರಸವತ್ತಾಗಿ ಕಾವ್ಯದಲ್ಲಿ ಒಡಮೂಡಿಸುತ್ತಾನೆ. ಇಂತಹ ಕವಿ ಹಾಸ್ಯವನ್ನು ತನ್ನ ಕತೆಯಲ್ಲಿ ಒಡಮೂಡಿಸಬೇಕಾದರೆ ಅವನಿಗೆ ಹಾಸ್ಯದ ಒಳಗುಟ್ಟು ಏನೆಂದು ತಿಳಿದಿರಬೇಕು. ಹಾಗೂ ಹಾಸ್ಯದ ಸ್ವರೂಪ ಕೂಡ ಗೊತ್ತಿರಬೇಕು.

ಹಾಸ್ಯವನ್ನು ಒಂದೇ ಬಗೆಯಲ್ಲಿ ಬಳಸಿಕೊಳ್ಳಬೇಕೆಂಬ ನಿಯಮವಿಲ್ಲ. ಕತೆಯ ಸನ್ನಿವೇಶಕ್ಕೆ ತಕ್ಕಂತೆ ನಾವು ಹಾಸ್ಯವನ್ನು ಬಳಸಿಕೊಳ್ಳಬೇಕೆಂಬ ತಿಳುವಳಿಕೆ ಕತೆಗಾರನಿಗೆ ಇರಬೇಕಾದ ಮುಖ್ಯ ಅಂಶಗಳಲ್ಲಿ ಒಂದು. ಕತೆಯು ಸಾಗುತ್ತಾ ಸಾಗುತ್ತಾ ಮಧ್ಯದಲ್ಲಿ ಹಾಸ್ಯ ಸನ್ನಿವೇಶ ಬರಬೇಕಾದರೆ ಅಲ್ಲಿ ಕತೆಗಾರನ ಜಾಣ್ಮೆ ತುಂಬ ಮುಖ್ಯ. ಅಲ್ಲದೆ ಬಲವಂತವಾಗಿ ಹಾಸ್ಯ ತುರುಕಿದರೆ ನಗಲಿಕ್ಕೋಸ್ಕರ ಕತೆ ಎಂಬಂತೆ ಕಾಣುತ್ತದೆ. ಆದ್ದರಿಂದ ತೇಜಸ್ವಿಯವರ ಕತೆಗಳು ಹಾಸ್ಯವನ್ನು ಬಳಸಿಕೊಂಡಿರುವಲ್ಲಿ ಅವರ ಹಾಸ್ಯ ನಿರೂಪಣಾ ತಂತ್ರದಿಂದ ಆ ಕತೆಗಳಿಗೆ ಒಂದು ರೀತಿಯ ಮೆರುಗನ್ನು ನೀಡಿವೆ ಎಂದು ಹೇಳಬಹುದು. ಮುಂದೆ ಅವರ ಕತೆಗಳಲ್ಲಿ ಬರುವ ಹಾಸ್ಯದ ಸ್ವರೂಪ ಯಾವ ಬಗೆಯದು ಎಂಬುದನ್ನು ಅವರ ಹಾಸ್ಯ ಸನ್ನಿವೇಶಗಳನ್ನು ಉದಾಹರಿಸುತ್ತಾ ವಿಶ್ಲೇಷಣೆ ಮಾಡಲಾಗಿದೆ.

ತೇಜಸ್ವಿಯವರು ಹಾಸ್ಯದ ಸ್ವರೂಪ ಒಂದು ರೀತಿಯಲ್ಲಿ ಕುಚೇಷ್ಟೆಯಿಂದ ಕೂಡಿದ ಹಾಗೂ ವಿಡಂಬನಾತ್ಮಕವಾಗಿ ವೈಚಾರಿಕ ನಿಲುವಿಗಳಿಂದ ಕೂಡಿದಂತವುಗಳಾಗಿವೆ. ಅವರ 'ಪರಿಸರದ ಕತೆ'ಗಳಲ್ಲಿ ಬರುವ 'ಎಂಗ್ಟನ ಪುಂಗಿ' ಕತೆಯಲ್ಲಿ ಎಂಗ್ಟನ ಪುಂಗಿ ನಾದಕ್ಕೆ ಹಾವುಗಳನ್ನು ಹಿಡಿಯುವುದಾಗಿ ಹೇಳಿದಾಗ ಅದನ್ನು ನೇರವಾಗಿ ನೋಡಬೇಕೆಂಬ ಹಂಬಲದಿಂದ ನಿರೂಪಕರು ತಮ್ಮ ಮನೆಯ ಹತ್ತಿರ ಅವನನ್ನು ಕರೆಯಿಸಿಕೊಂಡು ಹಾವು ಹಿಡಿಯಲು ಹೇಳುತ್ತಾರೆ. ಎಂಗ್ಟ ತನ್ನ ಪುಂಗಿಯನ್ನು ಬಳಸಿ ಕೆಲವು ಹಾವುಗಳನ್ನು ಹಿಡಿಯುತ್ತಾನೆ. ಆದರೂ ಅವರಲ್ಲಿದ್ದ ವೈಚಾರಿಕ ನಿಲುವುಗಳಿಗೆ ಅವರ ಮಿತ್ರರು ಹೇಳುವ ಮಾತುಗಳು ಮುಂದೆ ಅವರು ತಮ್ಮ ಮಿತ್ರರ ಎದುರು ಅಪಹಾಸ್ಯಕ್ಕೆ ಗುರಿಯಾದುದಕ್ಕೆ ಕಾರಣವಾಯಿತು. "ಎನ್ ಸ್ಸಾರ್ ನಿಮ್ಮಂಥಾ ಎಜುಕೇಟೆಡ್ಡು, ವಿಚಾರವಾದಿಗಳು, ಸೈಂಟಿಫಿಕ್ಕಾಗಿ ಯೋಚಿಸೋರು, ಧರ್ಮಸ್ಥಳಕ್ಕೆ ಹೋಗಿ ತಲೆ ಬೋಳಿಸಿ ಕೊಳ್ಳೂರನ್ನ ಲೇವಡಿ ಮಾಡ್ತಿದ್ರಿ ನೀವೇ ಹೀಗೆ ಮೋಸಹೋದರೆ ಇನ್ನು ಹಳ್ಳಿಯವರು ಮಂತ್ರ, ತಂತ್ರ, ದಯ್ಯಾ, ದ್ಯಾವರು ಅನ್ನೋದರಲ್ಲಿ ಆಶ್ಚರ್ಯವಿಲ್ಲ ಬಿಡಿ. ಹಾವು ಸಂಗೀತ ಕೇಳಿ ಹತ್ತಿರ ಬರುತ್ತದೆ. ಎಂದರೆ ನೀವು ನಂಬ್ತಿರಲ್ಲಾ! ಹಾವಿಗೆ ಕೇಳೋದಕ್ಕೆ ಕಿವಿಯೇ ಇಲ್ಲಾ ಅನ್ನೋ ಸಿಂಪಲ್ ಫ್ಯಾಕ್ಟ್ ನಿಮಗೆ ಹೊಳೀಲಿಲ್ವಾ? ಎಂದು ಸಂಶೋಧನಾ ಕೇಂದ್ರದ ವಿಜ್ಞಾನಿ ಮಿತ್ರರು ಸಾಮೂಹಿಕವಾಗಿ ಅಪಹಾಸ್ಯ ಮಾಡಿದರು. ಒಟ್ಟಿನಲ್ಲಿ ನಾನು ಎಂಗ್ಟನ ವಿಚಾರ ಎತ್ತಿದಾಗಲೆಲ್ಲ ನನ್ನ ಮಿತ್ರರು ನಾನು ಮತಾಂತರ ಹೊಂದಿದವನಂತೆ ಪರಿಗಣಿಸಿ ನನ್ನನ್ನು ಟೀಕಿಸಿದರು. ಎಂಗ್ಟ ನನ್ನನ್ನು ಪರಿವರ್ತನೆ ಮಾಡಿದ ಮೂಢನಂಬಿಕೆಗಳ ವಕ್ತಾರನಾದ ಎಂದು ಹೇಳುವಾಗ ಎಂಥ ವಿಚಾರವಂತರೂ

ಒಂದೊಂದು ಸಲ ದಢ್ಡರಾಗುವಂತಾ ಪರಿಸ್ಥಿತಿ ಒದಗುತ್ತದೆ ಹಾಗೂ ಸರಳ ಹಾಸ್ಯದ ಮುಖಾಂತರ ವೈಚಾರಿಕತೆಯನ್ನು ಹೇಳ ಹೊರಡುವ ಅವರ ಹಾಸ್ಯದ ವೈಖರಿ ಓದುಗರಲ್ಲಿ ಎಂದಿಗೂ ಉಳಿಯುವಂತಹದು. ಅವರೆ ಹೇಳುವಂತೆ ಮನುಷ್ಯರು "ಕಟ್ಟುಕತೆಗಳು ದೈವ, ಭೂತ, ನಂಬಿಕೆಗಳು ಅವರ ಸಾಂಸ್ಕೃತಿಕ ಪರಿಭಾಷೆ ಅವರನ್ನು ಆಧುನಿಕ ಜೀವನದ ಸಂದರ್ಭದಲ್ಲಿ ಪಳೆಯುಳಿಕೆಗಳ ಹಾಗೆ ಕೇವಲ ತಮಾಷೆಯ ವಸ್ತುಗಳ ಹಾಗೆ ಮಾಡಿರಬಹುದು"[3]

ಆದರೆ ತೇಜಸ್ವಿಗೆ ಇದರ ಮೌಲ್ಯಗಳ ಇನ್ನೊಂದು ಮುಖದ ಅರಿವು ಇದ್ದೆ ಇದೆ. ನಾವು ಆಧುನಿಕ ನಾಗರಿಕತೆಯಲ್ಲಿ ಬದುತ್ತಿರುವವರು. ಅವರನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾದರೆ ಪೌರಾತ್ಯ ನಾಗರೀಕತೆಯ ಅಮೂಲ್ಯಜ್ಞಾನ ಭಂಡಾರವೇ ದೊರತೀತು ಎಂದು ತೇಜಸ್ವಿ ಸೂಚಿಸುತ್ತಿರುವಂತೆ ಕಂಡುಬರುತ್ತದೆ. ಮುಖ್ಯವಾಗಿ ಹಾಸ್ಯ ಎಂದಾಗ ನಮಗೆ ನೆನಪಿಗೆ ಬರುವುದು ವಿಚಿತ್ರ ಆಕೃತಿಯ ಮನುಷ್ಯರು ಮಾಡುವ ಚೇಷ್ಟೆಗಳು ಉದಾಹರಣೆಗೆ:-ಪ್ರಾಚೀನ ಕಾಲದ ತೆನಾಲಿರಾಮ ಒಂದು ಸಲ ಕಾಳಿಕಾದೇವಿಯನ್ನು ಕುರಿತು ತಪಸ್ಸು ಮಾಡಿದನಂತೆ ದೇವಿ ಪ್ರತ್ಯಕ್ಷಳಾದಾಗ ತೆನಾಲಿರಾಮನಿಗೆ ಆಕೆಯ ಎಂಟು ಕೈಗಳನ್ನು ಕಂಡು ನಗು ಬಂತಂತೆ ಹಾಗೆಯೇ ಅವನು ಮಾಮೂಲಿ ಎರಡು ಕೈಗಳ ಮನುಷ್ಯನಿಗೂ ದೇವಿಯ ಎಂಟು ಕೈಗಳಿಗೂ ಇರುವ ವ್ಯತ್ಯಾಸ ತಿಳಿದು ತಡೆಯಲಾರದಷ್ಟು ನಗು ಬಂತಂತೆ ಹೀಗೆ ನಮ್ಮ ಮಾನವರು ಇರುವಂತ ರೀತಿಗೂ ಅದರಲ್ಲೂ ವಿಚಿತ್ರ ಮಾನವರ ಉದಾಹರಣೆಗೆ ಕಾಲು ಸ್ವಲ್ಪ ವಕ್ರವಾದಾಗ ಒಬ್ಬ ವ್ಯಕ್ತಿ ನಡೆಯುವ ರೀತಿ ನಮಗೆ ಹಾಸ್ಯಾಸ್ಪದವಾಗಿ ಕಾಣುತ್ತದೆ. ಇದು ಸಹಜ ನಗೆ ಎಂದು ಹೇಳಬಹುದು.

ಆದರೆ ಒಂದು ಕೃತಿಯಲ್ಲಿ ಆ ವರ್ಣನೆ ತರಬೇಕಾದರೆ ಕತೆಗಾರ ಬಳಸುವ ಹಾಸ್ಯಮಯ ಭಾಷೆ ತುಂಬಾ ನಾಜೂಕಾಗಿರಬೇಕು. ಹಾಗೆಯೇ ತೇಜಸ್ವಿಯವರು ಸಹ ವಿಚಿತ್ರಾಕಾರದ ವ್ಯಕ್ತಿಗಳ ಬಗ್ಗೆ ಹೇಳುವಾಗ ನಯವಾಗಿ ಗಂಭೀರವೆಂಬಂತೆ ಅವರ ಮಾತುಗಳು ನವೀರಾದ ಹಾಸ್ಯವನ್ನು ನಮಗೆ ನೀಡುತ್ತದೆ. ಅವರ ಮಾಸ್ತಿ ಮತ್ತು ಭೈರ ಕತೆಯಲ್ಲಿ ಅವರು ಮಾಸ್ತಿ ಮತ್ತು ಭೈರನ ಬಗ್ಗೆ ಹೇಳುವಾಗ ಓದುಗರಲ್ಲಿ ತಿಳಿ ಹಾಸ್ಯ ತೋರಿ ಬರುವುದುಂಟು.

"ಮಾಸ್ತಿಗೊಬ್ಬ ಅಣ್ಣ ಇದ್ದ. ಅವನ ಹೆಸರು ಭೈರ ಎಂದು ಅವರಿಬ್ಬರೂ ಯಾವ ಜಾತಿಯವರು, ಯಾವ ಕಡೆಯವರು ಇತ್ಯಾದಿಗಳಾವು ನನಗೆ ಸರಿಯಾಗಿ ಗೊತ್ತಿಲ್ಲ, ಎಲ್ಲಿಯವರು ಎಂದು ಕೇಳಿದರೆ ದಿನಕ್ಕೆ ಒಂದೊಂದು ದಿಕ್ಕು ತೋರಿಸುತ್ತಿದ್ದರು. ಒಂದು ದಿನ ಆಸ್ಟ್ರೇಲಿಯಾ ಕಡೆಗೆ ತೋರಿಸಿದರೆ, ಇನ್ನೊಂದು ದಿನ ಆಫ್ರಿಕಾ ಕಡೆಗೆ. ಅವರೊಡನೆ ಮಾತಾಡುವಾಗೆಲ್ಲ ಥೇಟ್ ಶಿಲಾಯುಗದ ಜನರಂತೆಯೇ ಇದ್ದ ಅವರು ಈ ಆಧುನಿಕ ಯುಗದಲ್ಲಿ ಹೇಗೆ ಕಾಲ ಹಾಕುತ್ತಾರೆಂದು ಯೋಚಿಸುತ್ತಿದ್ದೆ"[4] ಎಂದು ಹೇಳುವಾಗ ನಮಗೆ ಆ ಮನುಷ್ಯರ ಸಣ್ಣ ಕಲ್ಪನೆ ನಮ್ಮ ಭಾವನೆಗಳಲ್ಲಿ ಸುಳಿದು ನಗು ಬರುವುದುಂಟು. ಹಾಗೆ ತಮ್ಮ ಭಾಷಾಶೈಲಿಯ ಮುಖಾಂತರ ಹಾಸ್ಯವನ್ನು ಮೂಡಿಸುವುದು ಒಂದು ಲಕ್ಷಣ. ಮತ್ತೊಂದು

ರೀತಿಯಲ್ಲಿ ಎಂದರೆ ಹಾಸ್ಯವನ್ನು ನಿರೂಪಕ (ನಾಯಕ)ನ ಮುಖಾಂತರ ಹೇಳುವುದು. ಮೊದಲೆಲ್ಲ ಹಾಸ್ಯಕ್ಕೆಂದೇ ಕೆಲವು ಪಾತ್ರಗಳು ಮೀಸಲು. ಆದರೆ ಬರವಣಿಗೆ ಹಾಗೂ ಹೇಳುವ ಧಾಟಿಯಲ್ಲಿ ವಿಭಿನ್ನವಾಗಿ ಯೋಚಿಸಿದ ತೇಜಸ್ವಿಯವರು ನಿರೂಪಕನ ಮುಖಾಂತರ ಹಾಸ್ಯವನ್ನು ಹೇಳಲಿಕ್ಕೆ ಹೊರಟದ್ದು.

ಅವರು ಒಂದು ಸಲ ಹೋಟೆಲ್ಲಿನಲ್ಲಿ ಕುಳಿತಿರಬೇಕಾದರೆ ಅಲ್ಲಿ ಇದ್ದಕ್ಕಿದಂತೆ ಒಬ್ಬ ಹುಚ್ಚ ಇವರ ಹತ್ತಿರ ಬರುತ್ತಿರುವುದನ್ನು ಗಮನಿಸಿದ ಅವರು ಆ ಹುಚ್ಚನಿಗೆ ಹೆದರಿ ತಪ್ಪಿಸಿಕೊಂಡು ಬಿಲ್ಲನ್ನು ಕೊಡದೆ ಗಡಿಬಿಡಿಯಲ್ಲಿ ಹೋಗುತ್ತಿರುವಾಗ ಮ್ಯಾನೇಜರ್ ಎಲ್ಲರ ಮುಂದೆ ಬಿಲ್ಲಿನ ದುಡ್ಡು ಕೇಳಿದಾಗ ಅಲ್ಲಿದ್ದವರೆಲ್ಲ ಇವರನ್ನು ನೋಡಿ ನಗುವುದು. ಹೀಗೆ ಸರಳ ಸನ್ನಿವೇಶಗಳ ಮೂಲಕ ಹಾಸ್ಯವನ್ನು ತರುವುದು. ಆದರೆ ಒಂದೊಂದು ಸಲ ತುಂಬಾ ಗಂಭೀರ ಸನ್ನಿವೇಶದಲ್ಲೂ ಇವರು ಹಾಸ್ಯವನ್ನು ತರುತ್ತಾರೆ. ಉದಾಹರಣೆಗೆ:– ತಬರನ ಕತೆಯಲ್ಲಿ ತಬರನ ಹೆಂಡತಿಗೆ ಡಯಾಬಿಟಿಸ್ ಖಾಯಿಲೆ ಬಂದಾಗ ಅವರು ಹೇಳುವ ಮಾತು ಪರಿಸ್ಥಿತಿ ಗಂಭೀರವಾಗಿದ್ದರೂ ಹಾಸ್ಯಾಸ್ಪದವಾಗಿದೆ. "ಇದೇನಯ್ಯಾ ಬರೇ ಶ್ರೀಮಂತರಿಗೆ ಬರುವ ರೋಗ ಇದು. ರಾಜರೋಗ. ನಮ್ಮ ಕಾಲದಲ್ಲಿ ಒಂದೆರೆಡು ಜನ ಪರಂಗಿ ದೊರೆಗಳಿಗೆ ಬಂದಿತ್ತು ನೋಡು. ನಿನ್ನ ಹೆಂಡತಿಗೆ ಯಾಕೆ ಬಂದು ಇದು? ನಿನಗೂ ಶ್ರೀಮಂತನಾಗೋ ಯೋಗ ಇರಬಹುದೋ? ಎಂದು ವಿನೋದ ಮಾಡಿ ಡಾಕ್ಟರರು ನಾಲ್ಕಾರು ಮಾತ್ರೆಗಳನ್ನು ಬರೆದುಕೊಟ್ಟರು"[೬] ಹಾಗೆಯೇ ತಬರನ ಹೆಂಡತಿಯ ಕಾಲನ್ನು ಕಡಿಯಬೇಕೆಂದು ಡಾಕ್ಟರರು ಹೇಳಿದಾಗ ತಬರನು ತನ್ನ ಹತ್ತಿರ ಹಣವಿಲ್ಲದೆ ಮಾಂಸದ ಅಂಗಡಿಗೆ ಹೋಗಿ ಯೂಸುಫ್‌ನನ್ನು ತನ್ನ ಹೆಂಡತಿಯ ಕಾಲನ್ನು ಕಡೆಯಬೇಕೆಂದು ಕೇಳಿದಾಗ 'ಏನೋ ಹೆಣ್ತಿ ಕಾಲು ಕಡಿಸಿ ಸಾರು ಮಾಡ್ತಿಯೇನೋ?' ಎಂದು ಯೂಸೆಫ್ ಜೊತೆಗೂಡಿ ನಾಲ್ಕರು ಜನರ ನಕ್ಕರು. ಇಲ್ಲಿ ಹಾಸ್ಯವೇ ಮೇಲ್ನೋಟಕ್ಕೆ ಕಂಡುಬಂದರು ಅದರ ಹಿಂದಿರುವ ಅಸಹಾಯಕತೆ ಜನರ ನೋವು ಹತಾಶೆ ಓದುಗರ ಗಮನಕ್ಕೆ ತರುವಲ್ಲಿ ತೇಜಸ್ವಿಯವರ ಕಥಾ ನೈಪುಣ್ಯ ಅಮೋಘವಾದುದು.

ತೇಜಸ್ವಿಯವರ ಕತೆಗಳಲ್ಲಿ ಬರುವ ಹಾಸ್ಯದ ಸ್ವರೂಪ ಬೇರೆಯಾದರೂ ಅಲ್ಲಿನ ಸನ್ನಿವೇಶ ಹಾಗೂ ಕಥೆಯ ವಸ್ತುವಿಗೆ ಸಂಬಂಧ ಪಟ್ಟಂತೆ ರಚನೆಗೊಂಡಿರುವುದನ್ನು ಕಾಣಬಹುದಾಗಿದೆ. ಹಾಸ್ಯವು ಜೀವನದಲ್ಲಿ ಮನರಂಜನೆಗಷ್ಟೇ ಅಲ್ಲದೆ ಅದರಿಂದ ವೈಚಾರಿಕ ಬದುಕಿನ ಸ್ವರೂಪವನ್ನು ಕಟ್ಟಿಕೊಡುವಲ್ಲಿ ತೇಜಸ್ವಿಯವರ ಪ್ರಯತ್ನ ಉತ್ತಮವಾದುದಷ್ಟೇ ಅಲ್ಲ ಅದ್ಭುತವೆಂದೇ ಹೇಳಬಹುದು.

**೫.೨. ಹಾಸ್ಯದ ಬಗೆಗಳು:–**

ಹಾಸ್ಯಕ್ಕೆ ನಾನಾ ಬಗೆಗಳುಂಟು. ಅದು ಸ್ಫಟಿಕದ ಶಲಾಕೆಯಂತೆ, ಸ್ಫಟಿಕದ ಒಂದು ತುಂಡನ್ನು ತಿರುಗಿಸಿ ನೋಡಿದರೆ ಅದರಲ್ಲಿ ಅನಂತಮುಖ ಕಾಣಿಸುತ್ತದೆ. ಒಂದೊಂದದನ್ನು ಒಡೆದು ನುಚ್ಚು ನೂರು

ಮಾಡಿದರೆ ಮೂಲ ಸ್ಫಟಿಕವನ್ನೇ ಹೋಲುವ ಸಣ್ಣ ಪುಟ್ಟ ಸ್ಫಟಿಕಗಳು ನಿರ್ಮಾಣಗೊಳ್ಳುತ್ತವೆ. ಯಾವುದರನ್ನು ನೋಡಿದರೂ ಒಂದರ ಬದಲು ಹತ್ತು ಮುಖಗಳು. ಅವು ನೋಟಕರನ್ನೇ ಅಚ್ಚರಿಗೊಳಿಸುತ್ತದೆ. ಹೀಗೆ ಹಾಸ್ಯದ ಬಗೆಗಳಲ್ಲೂ ಅಂತಹದೊಂದು ಚಮತ್ಕಾರವಿದೆ. ಅದು ವ್ಯಕ್ತಿ, ಸನ್ನಿವೇಶ, ಸಂದರ್ಭಕ್ಕೆ ಅನುಗುಣವಾಗಿ ಬದಲಾಗುತ್ತದೆ. ಉದಾಹರಣೆಗೆ:– ತಿಳಿಹಾಸ್ಯ, ಗಂಭೀರ ಹಾಸ್ಯ, ವಿಡಂಬನಾತ್ಮಕ ಹಾಸ್ಯ, ಇತ್ಯಾದಿಯಾಗಿ ಕತೆಗಾರನ ಕೈಯಲ್ಲಿ ವಿವಿಧ ಬಗೆಗಳಲ್ಲಿ ಕತೆಗಳಲ್ಲಿ ಸನ್ನಿವೇಶಕ್ಕೆ ತಕ್ಕಂತೆ ವ್ಯಕ್ತವಾಗುತ್ತವೆ.

ತೇಜಸ್ವಿಯವರು ಮೂಲತಃ ಹಾಸ್ಯ ಲೇಖಕರಲ್ಲದೆ ಹೋದರು ಹಾಸ್ಯವನ್ನು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡಿರುವುದು ಅವರ ರಸಾಸ್ವಾದನೆ ಹಾಗೂ ಕತೆಗಳನ್ನು ಸ್ವಾರಸ್ಯಕರವಾಗಿ ಓದುಗರ ಮುಂದಿಡಲು ಮೊದಲಿಗೆ ಅವರು ಕಥಾಸನ್ನಿವೇಶಕ್ಕೆ ತಕ್ಕಂತೆ ಹಾಸ್ಯವನ್ನು ತರುವುದು ಅವರ ಬರವಣಿಗೆಯ ಶೈಲಿ ಎಂದೇ ಹೇಳಬೇಕು. ತೇಜಸ್ವಿಯವರು ತಮ್ಮ ಕತೆಗಳಲ್ಲಿ ತಿಳಿಹಾಸ್ಯವನ್ನು ಹೇಳುವಾಗ ಬಹಳ ನಾಜೂಕಾದ ಭಾಷೆಯ ಬಳಕೆಯನ್ನು ನಾವು ಕಾಣಬಹುದು. ಉದಾಹರಣೆಗೆ: ಅವರ 'ತುಕ್ಕೋಜಿ' ಎಂಬ ಕತೆಯಲ್ಲಿ ಆಧುನಿಕತೆಗೆ ಒಗ್ಗಿಕೊಳ್ಳುತ್ತಿರುವ ಹಳ್ಳಿಯಲ್ಲಿ ಆದಂತಹ ಬದಲಾವಣೆ ಹಾಗೂ ತುಕ್ಕೋಜಿಯ ವೈಯಕ್ತಿಕ ಬದುಕಿನಲ್ಲಿ ಆದಂತಹ ಬದಲಾವಣೆ ತುಕ್ಕೋಜಿಯ ಹೊಲಿಗೆ ಕ್ರಮವನ್ನು ಹೇಗೆ ಹಾಳುಮಾಡುತ್ತದೆ. ಹಾಗೂ ತುಕ್ಕೋಜಿ ಅದನ್ನು ಸಮರ್ಥಿಸಿಕೊಂಡು ಮುನ್ನೆಡೆಯುವ ಬಗೆ ಹಾಗೆಯೇ ಅಲ್ಲಿಗೆ ಬಂದ ಹುಡುಗಿ ತನ್ನ ಕುಪ್ಪಸವನ್ನು ಹಾಳು ಮಾಡಿ ಹೊಲಿದಿರುವ ತುಕ್ಕೊಜಿಗೆ ಕುಪ್ಪಸ ಹಾಕಲು ಆಗದೆ ವಾಪಸ್ಸು ತಂದು ಕೊಟ್ಟು ಹೇಳುವ ಮಾತು ತಿಳಿಹಾಸ್ಯವನ್ನು ಸ್ಪುರಿಸುತ್ತದೆ. 'ಒಬ್ಬಳು ಕಾಲೇಜು ಹುಡುಗಿಯಂತೂ ಕುಪ್ಪಸ ವಾಪಸು ಮಾಡಿ, ಏನು ತೊಂದರೆ ಎಂದು ಹೇಳಲಾರದೆ ಕಕ್ಕಾಬಿಕ್ಕಿಯಾಗಿ 'ಹಳೆಯ ಬ್ಲೌಸ್‌ನ್ನು ಕೊಂಚ ನೋಡಿ ಹೊಲಿದು ಕೊಡಿರಿ' ಎಂದು ಹೇಲಿ ಹೋಗಿದ್ದಳು. ಹಾಗೆಯೇ ತಮ್ಮ 'ಊರ್ವಶಿ' ಎಂಬ ಕತೆಯಲ್ಲಿ ಸೋಮು ಹುಚ್ಚು ನಾಯಿ ಕಡಿಯಿಸಿಕೊಂಡು ಇಂಜೆಕ್ಷನ್ ತೆಗೆದುಕೊಳ್ಳುವಾಗ ಹೇಳುವ ಮಾತುಗಳು "ಡಾಕ್ಟರ್ ಸೂಜಿ ಕೊಡುವ ಯಮಯಾತನೆ ಸೋಮುವಿಗೆ ತಡೆಯಲಾರದೆ ಹೋಗಿತ್ತು. ಅಲ್ಲ ಏಳು ಇಂಜಕ್ಷನ್ ಸಾಲದೆ, ಅಷ್ಟಕ್ಕೂ ನಾಯಿ ಒಂಬತ್ತು ದಿನ ಬದುಕಿದ್ದು ಹತ್ತನೆ ದಿನ ಇದ್ದಕ್ಕಿದಂತೆ ಸತ್ತಿತೆ? ಅಥವಾ ಮುನಿಸಿಪಾಲಿಟಿಯವರೇ ಯಾಕೆ ಹಿಡಿದೊಯ್ದಿರಬಾರದು?" ಎಂದು ಅವನಲ್ಲಿ ಹುಟ್ಟಿಕೊಳ್ಳುವ ಪ್ರಶ್ನಿಗಳ ಮುಖಾಂತರ ನಮಗೆ ತಿಳಿಹಾಸ್ಯ ಹೊರಸೂಸುತ್ತದೆ. ಅವರ ಮತ್ತೊಂದು ಕಥೆಯಾದ 'ಗಾಂಧೀಜಿ' ದೆಸೆಯಿಂದ ಕಥೆಯಲ್ಲಿ ಮೋನಿಯ ಹೆಸರಿಗೆ ಕೊಡುವ ವಿವರಣೆ "ಮೋನಿ ಅವನ ಕಾಲಿನ ಮೇಲೆ ಚಿಮ್ಮಿ ಬೀಳುತ್ತಿದ್ದ ಧೂಳಿನಷ್ಟೇ ಅರ್ಥಹೀನನಾಗಿದ್ದ. ಆ ಹೆಸರು ಅವನಿಗೆ ಇಟ್ಟ ಹೆಸರಲ್ಲ ಮೋನಿ, ಮೋಹನ, ಮೋಹನ್ ದಾಸ್ ಅಥವಾ ಮೋಹನ್ ದಾಸ್ ಕೆ.ಜಿ. ಎಂದರೆ ಮೋಹನ್ ದಾಸ್ ಕರಮಚಂದ್ ಗಾಂಧಿ ಎಂದಲ್ಲ. ಕಲ್ಲುಹಳ್ಳಿಯ ಗುಂಡೇಗೌಡರ ಮಗ ಮೋಹನ್ ದಾಸ ಎಂದು"[3] ಎಂದು ಕೊಡುವ ವಿವರಣೆ ಓದುಗರಿಗೆ

ಒಮ್ಮೆಲೆ ತಿಳಿಹಾಸ್ಯ ಒಡಮೂಡುತ್ತದೆ. ಸರಳಭಾಷೆಯ ಹಾಗೂ ನಯವಾದ ಬರವಣಿಗೆಯ ಮೂಲಕ ಸರಾಗವಾಗಿ ಇವರು ತಿಳಿಹಾಸ್ಯವನ್ನು ತಮ್ಮ ಕತೆಗಳಲ್ಲಿ ತರುತ್ತಾರೆ.

ಹಾಗೆಯೇ ಗಂಭೀರವಾಗಿ ಹಾಸ್ಯವನ್ನು ತರುವಲ್ಲಿಯು ಸಹ ತೇಜಸ್ವಿಯವರು ಅದ್ವಿತೀಯರೆಂದೇ ಹೇಳಬೇಕು. ಎಂತಹ ಗಂಭೀರ ವಿಷಯವೇ ಆಗಲಿ ಅಲ್ಲಿ ಹಾಸ್ಯ ತಂದು ಆ ವಿಷಯಕ್ಕೆ ಚ್ಯುತಿ ಬರದಂತೆ ಹಾಸ್ಯವನ್ನು ತರುವುದು ಇವರ ಸಾಹಿತ್ಯ ರಚನೆಗೆ ಹಿಡಿದ ಕನ್ನಡಿ. ಅವರ 'ಅಬಚೂರಿನ ಪೋಸ್ಟಾಫೀಸ್'ಕತೆಯಲ್ಲಿ ಬೋಬಣ್ಣ ತನ್ನ ಮನೆಯನ್ನೇ ಪೋಸ್ಟಾಫೀಸ್‌ನ್ನಾಗಿ ಮಾಡಿಕೊಂಡು ಅಲ್ಲಿ ತಾನೇ ಮುಖ್ಯಾಧಿಕಾರಿಯಂತೆ ವರ್ತಿಸುತ್ತಾ ಜೊತೆಗೆ ಪತ್ರಗಳನ್ನು ಓದುವುದು, ಬರೆಯುವುದು, ಅವರ ದಿನನಿತ್ಯದ ಕೆಲಸಗಳಲ್ಲಿ ಒಂದಾಗಿರುತ್ತದೆ. ಹೀಗಿದ್ದ ಬೋಬಣ್ಣ ಬೇಲಾಯದವನಿಗೆ ಬಂದ ಕಾಗದವನ್ನು ಓದಿ ಮತ್ತೆ ಅದೇ ಡಬ್ಬದಲ್ಲಿ ಹಾಕುತ್ತಾನೆ. ಅದರಲ್ಲಿ ಬೇಲಾಯದನ ಮಗಳಿಗೂ ಹಾಗೂ ಅವಳು ಕೆಲಸ ಮಾಡುವ ತೋಟದ ಮೇಸ್ತ್ರಿಗೂ ಸಂಬಂಧ ಇರುವ ವಿಷಯ ಇರುತ್ತದೆ. ಇದು ಊರವರೆಲ್ಲ ಓದಿ ಅಪಹಾಸ್ಯ ಮಾಡುವಂತಾಗುತ್ತದೆ. ಇಂತಹ ಗಂಭೀರ ಸಮಯದಲ್ಲಿ ಬೋಬಣ್ಣನ ಮನೆ ಮುಂದೆ ಆ ಪತ್ರದ ಸಲುವಾಗಿ ಮಾತಾನಾಡುವ ಅಲ್ಲಿನ ವ್ಯಕ್ತಿಗಳ ಮುಖಾಂತರ ಹಾಸ್ಯ ಹೀಗಿದೆ. "ಬೇಲಾಯದನ ಹೆಂಡತಿಗೆ ಏನೋ ಈ ಚಾಳಿ ಇದೆ ಅದಕ್ಕೆ ಬೇಲಾಯದ ಅವನ ಹೆಂಡತಿಯನ್ನು ಬಿಟ್ಟು ಇರುತ್ತಾನೆ ಎನ್ನುತ್ತಾರಪ್ಪ' ಎಂದು ಗೊಣಗಿದನು ದಾಸಣ್ಣ. 'ಥೇ ಥೇ ಹೋಗ್ರಿ ಹೋಗ್ರಿ ವಯಸ್ಸಾಗಿ ಜುಬ್ಬು ಹಿಡಿದ ಮುದಕಿ,ಅದಕ್ಕೆ ಎಂಥ ಹುಮ್ಮಸ್ಸು ಇರ್ತದೆ, ಯಾರೂ ಒಪ್ಪೂ ಮಾತಲ್ಲ ಇದು' ಎಂದ 'ಅದಕ್ಕೆ ಮೊದಲಿನವರು ಹ್ಞೂ ಹ್ಞೂ ನಿನಗೆ ಗೊತ್ತಿಲ್ಲ ಮುದಕರಿಗೆ ಇರೋ ತೆವಲು' ಎಂದು ಮುಸಿ ಮುಸಿ ನಕ್ಕನು. ಆ ಗುಂಪಿನಲ್ಲಿದ್ದ ಓರ್ವ ಕೊಂಚ ವಯಸ್ಸಾದ ವ್ಯಕ್ತಿ ಈ ಮಾತು ತನಗೇ ಅನ್ವಯಿಸುತ್ತದೆ ಎಂದು ಪರಿಭಾವಿಸಿ ಅದನ್ನೊಂದು ಹೊಗಳಿಕೆ ಎಂದು ಗಣಿಸಿ ಹೆಮ್ಮೆಯಿಂದ ನಕ್ಕನು. ಅದಕ್ಕೆ ಮೊದಲು ಮಾತನಾಡಿದ ವ್ಯಕ್ತಿ. 'ಹಂಗಲ್ಲ ಪೋಸ್ಟು ಮಾಸ್ಟರೇ ಮುದುಕರಿಗೆ ಮುದುಕರ ಮೇಲೆ ಚಪಲ ಇದ್ದರೆ ಸರಿಯಿರೋದು. ಮುದುಕರಿಗೆ ಹುಡುಗರನ್ನ ಕಂಡರೆ ತೆವಲು ಹೆಚ್ಚು' ಎಂದನು. "ಹಂಗಾರ ಮುದುಕರ ಸವಾಸ ಕಷ್ಟ. ಇವರ ಮೇಲೆ ಕೊಂಚ ನಿಗಾ ಇಟ್ಟೆ ಇರಬೇಕು ಎಂದ ಬೋಬಣ್ಣ. ಅವನ ಮಾತಿಗೆ ಎಲ್ಲರೂ ಮುಸಿ ಮುಸಿ ನಕ್ಕರು"[4] ಹೀಗೆ ಬೇಲಾಯದನ ಮಗಳ ಮಾನದ ವಿಷಯ ಗಂಭೀರವಾದರೂ ತೇಜಸ್ವಿ ಅಲ್ಲಿನ ಸಾಮಾನ್ಯ ಪಾತ್ರಗಳ ಮುಖಾಂತರ ವಿಷಯವನ್ನು ವ್ಯಂಗವಾಗಿ ಹಾಸ್ಯವನ್ನು ತಂದಿರುವುದು ಹಾಗೆಯೇ ಅವರ 'ಅವನತಿ' ಎಂಬ ಕತೆಯಲ್ಲಿ ಸುಬ್ಬಯ್ಯನಿಗೂ ಹಾಗೂ ಗೌರಮ್ಮನಿಗೂ ಮಕ್ಕಳಾಗಲಿಲ್ಲ ಎಂಬ ಕಾರಣಕ್ಕಾಗಿ ಟೀಕಿಸಿದಾಗ, ಸುಬ್ಬಯ್ಯ ಹೇಳುವ ಮಾತುಗಳು ಮೇಲ್ನೋಟಕ್ಕೆ ಹಾಸ್ಯಾಸ್ಪದವಾಗಿ ಕಂಡರು ತುಂಬಾ ಗಂಭೀರದ ವಿಷಯವಾಗಿ ಧ್ವನ್ಯಾರ್ಥ ನಮಗೆ ತಿಳಿಯುತ್ತದೆ. "ಸುಬ್ಬಯ್ಯನಿಗೇನು ಮಕ್ಕಳ ಯೋಗ ಇಲ್ಲ ಅಂತ ಕಾಣ್ತದೆ, ಮೂರ್‍ನಾಲ್ಕು ಮಕ್ಕಳಾದವು. ಆದರೇನು, ಆದವು! ಹೋದವು! ಸುಬ್ಬಯ್ಯನಾಗೆ ಏನಾದರೂ ಒಳರೋಗ ದೋಸ ಉಂಟಾ?" ಎಂದು ಈರೇಗೌಡ

ಹೇಳಿದ. ಹೀಗೆಂದು ಈರೇಗೌಡ ನಾಲ್ಕರೂ ಕಡೆ ಮಾತಾಡಿಯೂ ಇದ್ದ. ಇದು ಸುಬ್ಬಯ್ಯನ ಕಿವಿಯವರೆಗೂ ಹೋಗಿತ್ತು. ಅದನ್ನು ಕೇಳಿ ಅವನ ಕಿವಿ ತಲುಪಿಸಿದವನ ಬಳಿ, ಸುಬ್ಬಯ್ಯ 'ಅವನ ಹೆಣ್ತಿ ಕಳಿಸಲಿ, ತೋರಿಯಿಸ್ತಿನಿ ದೋಸ"[2] ಎಂದು ಹೇಳಿಕೊಂಡು ನಕ್ಕಿದ್ದ ಮತ್ತು ಹಲ್ಲು ಕಡಿದಿದ್ದ. ಹೀಗೆ ಸುಬ್ಬಯ್ಯನಿಗೆ ಮಕ್ಕಳಾಗದೇ ಇರುವುದು ಅವನ ಗಂಡಸುತನದ ಸ್ವಾಭಿಮಾನಕ್ಕೆ ಇರುವ ಸವಾಲು ಎಂದು ಹೇಳುವ ಅವನ ಮಾತುಗಳು ಗಂಭೀರತೆಯಲ್ಲೂ ಹಾಸ್ಯವನ್ನು ತರುತ್ತದೆ.

ಹಾಗೆಯೇ ಅನಾದಿಕಾಲದಿಂದಲೂ ನಮ್ಮ ಮನುಷ್ಯ ಪ್ರಾಣಿಗೆ ಅಂಟಿಕೊಂಡ ಮಹಾ ಜಾಡ್ಯವೆಂದರೆ ಜಾತಿ. ಇಂತಹ ಜಾತಿಯ ವಿಚಾರವಾಗಿ ಇವರ 'ಡೇರ್ ಡೆವಿಲ್ ಮುಸ್ತಫಾ' ಕತೆಯಲ್ಲಿ ಬರುವ ಹಾಸ್ಯ ಸನ್ನಿವೇಶ ವಿಷಯ ಗಂಭೀರವಾದದು ಹಾಸ್ಯದ ಮೂಲಕ ಗಂಭೀರ ಪರಿಸ್ಥಿತಿಯು ಸರಳವಾಗುತ್ತದೆ. ಮುಸ್ತಫಾ ಮುಸ್ಲಿಂ ಯುವಕ ಎಂಬ ಒಂದೇ ಕಾರಣಕ್ಕಾಗಿ ಅವನ ಟೋಪಿ ತೆಗೆಯಬೇಕೆಂದು ಇಲ್ಲವಾದರೆ ನಾವು ಪಾಠ ಕೇಳುವುದಿಲ್ಲವೆಂದು ಹೇಳುತ್ತಾರೆ. ಪಿಕಲಾಟಕ್ಕೆ ಸಿಕ್ಕ ಮಾಸ್ತರರು ಆ ಸಮಸ್ಯೆಯನ್ನು ಪರಿಹರಿಸುವಲ್ಲಿ ವಿಫಲರಾಗುತ್ತಾರೆ.

"ಒಟ್ಟಿನಲ್ಲಿ ತಕರಾರು ತೆಗೆಯಬೇಕೆಂದು ನಾವೆಲ್ಲ ಸಿದ್ಧರಾದೆವು. ಅವನ ಹಿಂದುಗಡೆ ಕುಳಿತಿದ್ದ ನಾಲ್ವರು ಹುಡುಗರು ಎದ್ದುನಿಂತು 'ಸಾರ್' ಎಂದು ಪಾಠ ಮಾಡುತ್ತಿದ್ದ ವೃದ್ಧ ಚರಿತ್ರೆ ಮಾಸ್ತರರನ್ನು ಕರೆದರು. ಮಾಸ್ತರರು ಇತ್ತ ತಿರುಗಿದಾಗ 'ಮುಸ್ತಫಾನ ಟೋಪಿ ನಮಗೆ ಅಡ್ಡ ಬರುತ್ತದೆ ಸಾರ್. ಬೋರ್ಡ್ ಕಾಣಿಸುತ್ತಿಲ್ಲ. ಟೋಪಿ ತೆಗಿಸಿ ಎಂದು ಆಕ್ಷೇಪಿಸಿದರು. ಮಾಸ್ತರರು ಮುಸ್ತಫಾನಿಗೆ ಟೋಪಿ ತೆಗೆಯುವಂತೆ ವಿನಂತಿಸಿಕೊಂಡರು. ಮುಸ್ತಫಾ ನೀವು ಟೋಪಿ ಹಾಕಿಕೊಂಡಿದ್ದೀರಿ. ನಾನೇಕೆ ಹಾಕಿಕೊಳ್ಳಬಾರದು ಎಂದು ಪಟ್ಟು ಹಿಡಿದ ಚರಿತ್ರೆ ಮಾಸ್ತರರು ಕಕ್ಕಾಬಿಕ್ಕಿಯಾದರು.

ಅಷ್ಟರಲ್ಲೇ ಯಾರೋ ನಮ್ಮ ಕ್ಲಾಸಿನ ದೊಂಬಿಯನ್ನು ಪ್ರಿನ್ಸಿಪಾಲರಿಗೆ ಮುಟ್ಟಿಸಿದರು. ಯುವಕ ಪ್ರಿನ್ಸಿಪಾಲರು ಓಡೋಡಿ ಬಂದರು. ಪರಿಸ್ಥಿತಿಯನ್ನು ಕೂಲಂಕುಷವಾಗಿ ತಿಳಿದು ಬಹಳ ಹೊತ್ತು ಯೋಚಿಸಿದರು. ಕೊನೆಗೆ ಮುಂದೆ ಕುಳಿತುಕೊಳ್ಳುವುದಾದರೆ ಮುಸ್ತಫಾ ಟೋಪಿ ತೆಗೆಯಬೇಕೆಂತಲೂ ಟೋಪಿ ತೆಗೆಯಲಾಗದೆಂದರೆ ಹಿಂದುಗಡೆ ಬೆಂಚಿನಲ್ಲಿ ಕುಳಿತುಕೊಳ್ಳಬೇಕು ಎಂದು ತೀರ್ಮಾನ ಕೊಟ್ಟರು. ಮುಸ್ತಫಾನು ಮನಸ್ಸಿಲ್ಲದ ಮನಸ್ಸಿನಿಂದ ಇದಕ್ಕೆ ಸಮ್ಮತಿಸಿದನು. ಪ್ರಿನ್ಸಿಪಾಲರು ಚರಿತ್ರೆಯ ಮಾಸ್ತರರಿಗೆ 'ಏನ್ರಿ ಹುಡುಗರನ್ನು ಕೊಂಚ ಗುಡ್ ಹ್ಯೂಮರ್‌ನಲ್ಲಿ ಇಟ್ಟುಕೊಳ್ಳಲು ನಿಮಗೆ ಬರುವುದಿಲ್ಲೇನ್ರಿ" ಎಂದು ಜೋರು ಮಾಡಿಹೋದರು. ಚರಿತ್ರೆಯ ಮಾಸ್ತರು ಹೆಡ್ಡು ಹಡ್ಡಾಗಿ 'ಹೆಹೆಹೆ' ಎಂದು ನಕ್ಕರು. ಹೀಗೆ ಜಾತಿ ವಿಷಯ ಗಂಭೀರವಾದುದಾದರೂ ಹಾಸ್ಯದ ಮೂಲಕ ಅದನ್ನು ಸರಳವಾಗಿಸುವ ರೀತಿಯನ್ನು ಕಾಣಬಹುದು.

ಇನ್ನು ವಿಡಂಬನಾತ್ಮಕ ಹಾಸ್ಯಕ್ಕೆ ಬಂದರೆ, ಅನ್ಯರ ಡೊಂಕನ್ನು ತಿದ್ದಿ ಅವರನ್ನು ಹಾಸ್ಯಕ್ಕೆ ಗುರಿ ಮಾಡುವುದೇ ವಿಡಂಬನೆ. ಇಂತಹ ಹಾಸ್ಯ ವೈಖರಿಯನ್ನು ನಾವು ತೇಜಸ್ವಿ ಕತೆಗಳಲ್ಲಿ ನಾವು

ಕಾಣಬಹುದಾಗಿದೆ. ಉದಾಹರಣೆಗೆ 'ಪಾಕಕ್ರಾಂತಿ' ಎಂಬ ಕತೆಯಲ್ಲಿ ಹಾಲಿನಿಂದಾದ ಫಜೀತಿಯಿಂದ ಬೇಸತ್ತು ಹಾಲನ್ನು ಉಪಯೋಗಿಸದೆ ಡಿಕಾಶನ್ ಮಾಡಿ ಕುಡಿಯೋಣ ಎಂದ ವಿಜ್ಞಾನಿ ಮಿತ್ರನ ಮಾತಿಗೆ ಅವರು ಹೇಳುವ ಮಾತುಗಳು ಒಂದು ರೀತಿಯ ವಿಡಂಬನಾತ್ಮಕ ದೃಷ್ಟಿಕೋನ ಎಂದೇ ಹೇಳಬೇಕು.

"ನತ್ತಿಂಗ್ ಟು ವರಿ, ಕಾಫಿ, ಟೀ ಮಾಡೋ ತೊಂದರೆ ಯಾಕೆ ತೋಗೋತೀಯ ನಮ್ಮ ದೇಶದಲ್ಲಿ ಮಾತ್ರ ಕಣಯ್ಯ ಬಾಳ ಅನ್‌ಸೈಂಟಿಫಿಕ್. ನಾನು ಇಂಗ್ಲೆಂಡ್ ಜಪಾನು ಎಲ್ಲಾ ಕಡೆ ತಿರುಗಿದಾನಲ್ಲ ಎಲ್ಲೂ ಯಾರೂ ಕಾಫಿಗೆ ಹಾಲು, ಸಕ್ಕರೆ ಮಿಕ್ಸ್ ಮಾಡಿ ಕಲಬೆರಕೆ ಪಾನೀಯ ಮಾಡಿದ್ದು ನೋಡಿಲ್ಲ ಎಂದವನೆ, ಕರ‍್ರಗೆ ನೀರಾದ ಟಾರಿನಂತೆ ಕಾಣುತ್ತಿದ್ದ ಡಿಕಾಕ್ಷನ್ ಒಂದು ಗುಟುಕು ಕುಡಿದವನೆ 'ಕರೆಕ್ಟ್ ನೋಡಯ್ಯ' 'ಫಾರಿನ್‌ನಲೆಲ್ಲಾ ಹೀಗೆ ಕುಡಿಯೋದು ಎಂದು ಹೊಗಳಿದ. ಆದರೆ ಅವನ ಬಾಯಲ್ಲಿ ಹೇಳಿದ್ದು ಯಾವುದು ಅವನ ಮುಖದಲ್ಲಿ ಕಾಣಲಿಲ್ಲ. ಎಂದು ಇನ್ನೊಂದು ಗುಟುಕು ತೆಗೆದುಕೊಂಡವನೆ ತಾನು ಹೋಮಿಯೋಪತಿ ಔಷಧಿ ತೆಗೆದುಕೊಳ್ಳುತ್ತಿರುವುದಾಗಿಯೂ ಅದಕ್ಕೆ ಕಾಫಿ, ಟೀ, ಕುಡಿಯಬಾರದೆಂದು ಹೇಳಿ ಹೊರಕ್ಕೆ ಹೋಗಿ ಉಗಿದು, ನಿರ್ಗಮಿಸಿದ. ಅವನು ಹೇಳಿದ ಅಮೋಘ ಪಾನೀಯ ಪಾತ್ರೆಯಲ್ಲಿ ಇನ್ನೂ ಕೊಂಚ ಉಳಿದಿತ್ತು. ತುಸು ನಾಲಿಗೆ ಮೇಲೆ ಹಾಕಿಕೊಂಡು ಚಪ್ಪರಿಸಿದೆ ನಿನ್ನ ವಿಜ್ಞಾನಿ ಮಿತ್ರನಿಗೆ ಯಾಕೆ ಹಠಾತ್ತನೆ ತಾನು ತೆಗೆದುಕೊಳ್ಳುತ್ತಿರುವ ಹೋಮಿಯೋಪತಿ ಚಿಕಿತ್ಸೆ ಜ್ಞಾಪಕಕ್ಕೆ ಬಂತೆಂದು ಅರ್ಥವಾಯ್ತು. ಹೀಗೆ ತಿಳಿಯದ ವಿಷಯದ ಬಗ್ಗೆ ವಿಜ್ಞಾನಿ ಸ್ನೇಹಿತನಿಂದ ತಿಳಿದು ಅವನನ್ನೇ ಮತ್ತೆ ವಿಡಂಬನಾತ್ಮಕವಾಗಿ ನೋಡುವ ಪರಿಯಲ್ಲಿ ಹಾಸ್ಯವನ್ನು ಕಾಣಬಹುದು. ಹಾಗೆಯೇ ಅವರ ಮಳೆಗಾಲದ ಛತ್ರಿ ಕತೆಯಲ್ಲಿ ಪಾಪಣ್ಣ ಮೂಢನಂಬಿಕೆಗಳಿಂದ ಮಳೆ ಬಂದರು ಬರದಿದ್ದರೂ ಎಲ್ಲಾ ಜೋತಿಷಿಯಿಂದ ನಾನು ಮೊದಲೇ ತಿಳಿದುಕೊಂಡಿದ್ದೇನೆ ಎಂಬಂತೆ ಮಾತನಾಡುವ ಪಾಪಣ್ಣನ ಗುಣವನ್ನು ವಿಡಂಬನಾತ್ಮಕ ಹಾಸ್ಯದ ಮೂಲಕ ಕಟ್ಟಿಕೊಡುತ್ತಾರೆ.

"ನಮ್ಮೂರಿನ ಪಕ್ಕದ ಹಳ್ಳಿಯ ಪಾಪಣ್ಣ. ಅವರ ಹಳ್ಳಿ ಕಿಟ್ಟಪ್ಪ ಜೋಯಿಸರ ಕೈಲಿ ಪಂಚಾಂಗ ನೋಡಿಸಿ ಬಂದು ಈ ಸಾರಿ ಮಳೆ ಹೇಗೆಂದು ಹೇಳುತ್ತಿದ್ದ. ಜೋಯಿಸರ ಮಾತುಗಳೋ ಎಷ್ಟೊಂದು ಒಗಟುಗಳಂತಿರುತ್ತಿದ್ದುವೆಂದರೆ ಅವುಗಳಿಂದ ಎಲ್ಲಾ ಅರ್ಥ ಬರುವಂತಿದ್ದವು. ಮಳೆ ಬರಲಿ, ಬರದೆ ಇರಲಿ 'ನಾ ಮೊದಲೇ ಹೇಳಿರ‍್ಲಿಲ್ಲೇನು' ಎಂದು ಪಾಪಣ್ಣ ಹಲ್ಲುಕಿರಿಯುವುದನ್ನು ಮಾತ್ರ ಬಿಡುತ್ತಿರಲಿಲ್ಲ"

ಹೀಗೆ ವ್ಯಕ್ತಿಗಳು ಯಾವ ರೀತಿ ಡಾಂಬಿಕತನಕ್ಕೆ ಮಾರು ಹೋಗಿದ್ದಾರೆ. ಹಾಗೂ ಅವರನ್ನು ಅವರ ಮಾತುಗಳಿಂದ ಗುಣಸ್ವಭಾವಗಳಿಂದ ಹೇಳುವ ಬಗೆಯನ್ನು ಹಾಸ್ಯದ ಮೂಲಕ ಹೇಳುವಂತಹುದನ್ನು ನಾವು ತೇಜಸ್ವಿಯವರ ಕತೆಗಳಲ್ಲಿ ಕಾಣಬಹುದು. ಹಾಸ್ಯ ಎಂಬುದು ಎಂತಹ ಸನ್ನಿವೇಶದಲ್ಲಾದರೂ ತರಬಹುದು. ಆದರೆ ಆ ವಿಷಯಕ್ಕೆ ಮಾತ್ರ ಚ್ಯುತಿ ಬರದಂತೆ ಹಾಸ್ಯವನ್ನು ತರಬೇಕಾದುದು ಕತೆಗಾರನ ಜಾಣ್ಮೆ. ಇಂತಹ ಜಾಣ್ಮೆ ತೇಜಸ್ವಿಯವರಲ್ಲಿ ನಾವುಕಾಣಬಹುದು.

### ೫.೩ ಹಾಸ್ಯ ವ್ಯಕ್ತಪಡಿಸಿರುವ ತಂತ್ರ :-

ಪ್ರಾಚೀನ ಕಾಲದಲ್ಲಿ ಹಾಸ್ಯವನ್ನು ರಸವೆಂದು ಭಾವಿಸಿ ಅದನ್ನು ತಾವು ಅಡಿಗೆಯಲ್ಲಿ ಬಳಸುವ ಪರಿಕರಗಳಂತೆ ಸಾಹಿತ್ಯ ಕೃತಿಗಳಲ್ಲೂ ಅಷ್ಟೇ ಹಾಸ್ಯ ಕೂಡ ಒಂದು ಅಂಶ ಎಂದು ಬರೆಯುತ್ತಾ ಬಂದರೂ ಹಾಸ್ಯವನ್ನು ಚಮತ್ಕಾರಭರಿತವಾಗಿ ಬಳಸಿದವರಲ್ಲಿ ತೆನಾಲಿರಾಮ ಹಾಗೂ ಬೀರಬಲ್ಲರ ಕಥೆಗಳಲ್ಲಿ ನಾವು ಕಾಣಬಹುದು. ಆಧುನಿಕಕ್ಕೆ ಬಂದರೆ ಶ್ರೀನಿವಾಸರು ಸಣ್ಣ ಮಕ್ಕಳಿಗಾಗಿಯೇ ಕಥೆ ಹೇಳಿದುದರಿಂದ ಅವರಲ್ಲಿ ನಾವು ತಿಳಿಹಾಸ್ಯವನ್ನು ಕಾಣಬಹುದಾಗಿದೆ. ನಂತರದಲ್ಲಿ ಹಾಸ್ಯವನ್ನೇ ಮುಖ್ಯ ಗುರಿಯಾಗಿಟ್ಟುಕೊಂಡು ಅದರ ಮೂಲಕ ನೀತಿ ಬೋಧನೆ ಮಾಡಿದವರಲ್ಲಿ ಎ.ಆರ್.ಕೃಷ್ಣಶಾಸ್ತ್ರೀಗಳೇ ಮೊದಲಿಗರೆನ್ನಬಹುದು. ಹಾಸ್ಯವನ್ನೇ ಪ್ರಧಾನವಾಗಿ ತಂದ ಗೊರೂರು ಸಹ ಪರರಿಗೆ ನೋವನ್ನುಂಟು ಮಾಡದ ಹಾಸ್ಯವು. ಅವರ ಕಥೆಗಳಲ್ಲಿ ತೆರೆ ತೆರೆಯಾಗಿ ಬರುತ್ತದೆ. ಇನ್ನು ಶಿವರಾಮಕಾರಂತರಲ್ಲಿ ಹಾಸ್ಯ ಎಂಬುದು ಅನೀರಿಕ್ಷಿತವೆಂಬಂತೆ ಬಂದು ಹಾಸ್ಯದ ಹೊನಲಾಗುತ್ತದೆ.

ಕಾರಂತರ ದಾರಿಯಲ್ಲೇ ನಡೆದ ತೇಜಸ್ವಿಯವರು ಸಹ ತಮ್ಮ ಎಲ್ಲಾ ಕೃತಿಗಳಲ್ಲೂ ಸಹ ಹಾಸ್ಯವನ್ನು ತಂದಿದ್ದಾರೆ. ಇವರ ಕತೆಗಳಲ್ಲಿ ಹಾಸ್ಯವು ಕೆಲವೊಮ್ಮೆ ನೀತಿಬೋಧಕವಾಗಿ, ವಿಡಂಬನಾತ್ಮಕವಾಗಿ, ವೈಚಾರಿಕತೆಯ ಪ್ರತಿಪಾದಕವಾಗಿ ಹೊರಹೊಮ್ಮಿತು. ಅಂದರೆ ಆ ಕತೆಯ ಸನ್ನಿವೇಶಕ್ಕೆ ತಕ್ಕಂತೆ ಅವರು ಹಾಸ್ಯವನ್ನು ವ್ಯಕ್ತಪಡಿಸಿದ್ದಾರೆ. ಒಬ್ಬ ಕತೆಗಾರ ಹಾಸ್ಯವನ್ನು ತನ್ನ ಕಥಾವಸ್ತುವಿಗೆ ತಕ್ಕಂತೆ ತರುವುದು ಅವನ ಹಾಸ್ಯ ನಿರೂಪಣಾ ತಂತ್ರ ಎಂದು ಹೇಳಬೇಕು. ಆ ಹಾಸ್ಯವು ಕಥೆಯ ಒಟ್ಟಾರೆ ಅಂಶಕ್ಕೆ ಯಾವುದೇ ಚ್ಯುತಿ ತರಬಾರದು. ಇಂತಹ ಒಂದು ತಂತ್ರವನ್ನು ತೇಜಸ್ವಿಯವರ ಕತೆಗಳಲ್ಲಿ ನಾವು ಕಾಣಬಹುದು. ಮುಖ್ಯವಾಗಿ ನಾವು ಅವರ ಪರಿಸರದ ಕತೆಗಳನ್ನು ಗಮನಿಸಿದಾಗ ಅವರಲ್ಲಿ ಬರುವ ಕುಕ್ಕಟ ಪಿಶಾಚ ಎಂಬ ಕಥೆಯಲ್ಲಿ ಮಾರನ ಮಾತುಗಳು ಅವನ ವ್ಯಕ್ತಿತ್ವದ ಜೊತೆಗೆ ಅವನು ಹೇಳುವಾಗ ನಿರೂಪಕರು ಹೇಳುವ ಮಾತುಗಳು ಹಾಸ್ಯವನ್ನು ತರುತ್ತವೆ. ಇಲ್ಲಿ ಸನ್ನಿವೇಶ ಮಾರ ತನಗಾದ ಅನುಭವವನ್ನು ಇತರರಿಗೆ ಭಯ ಹುಟ್ಟಿಸುವ ಸಂದರ್ಭ ಇದನ್ನು ನಿರೂಪಕ ವಿಡಂಬನೆ ಮಾಡುವ ಭಾಷೆಯ ಶೈಲಿ ನಮಗೆ ಹಾಸ್ಯಾಸ್ಪದವೆನಿಸುತ್ತದೆ.

"ಮಾರ ಈಚಲು ಹರದಲ್ಲಿ ಒಂದು ದೆವ್ವ ಹಿಡಿದ ಕೋಳಿ ಇದೆಯೆಂದು ಮನುಷ್ಯರೆದುರು ಬಂದು ನರ್ತನ ಮಾಡುತ್ತದೆಂದು ಅದನ್ನು ಹಿಡಿಯಲು ಯಾರಾದರೂ ಹೋದರೆ ಅವರನ್ನು ಆಕರ್ಷಿಸಿ ಗುಂಡಿಯೊಳಗೆ ಹಾಕುತ್ತದೆಂದೂ ಮಾರ ಹೇಳಿದ. ಮುದುಕ ಗುಂಡಿಯೊಳಗೆ ಬಿದ್ದು ಈಗ ದೆವ್ವ ಕಾರಣ ಎಂದು ಹೇಳುತ್ತಿದ್ದಾನೆಂದು ನನಗೆ ಅನ್ನಿಸಿತು. ಅದನ್ನು ಮಾರನಿಗೆ ಹೇಳಿ "ಕುಡಿದು ಗುಂಡಿಗೆ ಬಿದ್ದು ಈಗ ದೆವ್ವ ಕಾಟ ಕೊಡ್ತು ಅಂತ ಹೇಳ್ತಿಯೇನೊ?" ಎಂದು ಜೋರು ಮಾಡಿದೆ. ಇಲ್ಲಿ ಸಂದರ್ಭಕ್ಕೆ ತಕ್ಕಂತೆ ತಿಳಿ ಹಾಸ್ಯವನ್ನು ನಾವು ಕಾಣಬಹುದಾಗಿದೆ. ಹಾಗೆಯೇ ಅವರ ಮತ್ತೊಂದು ಕತೆಯಾದ

'ಪ್ಯಾರನಿಗೆ ಸೈತಾನನ ಕಾಟ'ದಲ್ಲಿ ಪ್ಯಾರ ತನ್ನ ಮೂಢನಂಬಿಕೆಯ ಫಲವಾಗಿ ಓತಿಕ್ಯಾತವನ್ನು ಶತ್ರು ಎಂದು ಭಾವಿಸಿ ಅದನ್ನು ಸಾಯಿಸಲು ಪ್ರಯತ್ನಿಸುತ್ತಿರಬೇಕಾದರೆ ಅದು ಅವನ ಚಡ್ಡಿಯೊಳಗೆ ನುಗ್ಗಿ ನಂತರ ಮೇಲಕ್ಕೆ ಹತ್ತಿ ಅವನು ನಿರ್ವಸ್ತ್ರನಾಗುತ್ತಾನೆ. ಆ ಕಿರುಚಾಟವನ್ನು ಕಂಡು ಬುಟ್ಟಿ ಹೊತ್ತುಕೊಂಡು ಹೊರಟಿದ್ದ ಮಂಜಪ್ಪ  ಬಂದು ಗಾಬರಿಯಲ್ಲಿ ಏನಾಯ್ತು ಎಂದು ಕೇಳಿದಾಗ ನಿರೂಪಕ 'ಓತಿಕ್ಯಾತ ಮೈಮೇಲೆ ಹತ್ತಿತ್ತು' ಎಂದು ಹೇಳಿದೆ. ಮಂಜಪ್ಪ ನಗಲಾರಂಭಿಸಿದ ಮೂಢರಂತೆ ನಿಂತು ನೋಡುತ್ತಿದ್ದ ಅಣ್ಣೇಗೌಡರಿಗೆ ಅದುದ್ದೇನೆಂದು ವಿವರಿಸಿದಾಗ ಅವರು ಬಿದ್ದು ಬಿದ್ದು ನಕ್ಕರು.

ಇಲ್ಲಿ ಕತೆ ಸರಳವಾಗಿದ್ದರೂ ಕುತೂಹಲ ಹುಟ್ಟಿಸುವ ಪ್ಯಾರನಂತ ಪಾತ್ರಗಳ ಭಾಷೆಯ ವೈಖರಿ ವಿಶಿಷ್ಟವಾಗಿದೆ. ಜೇನು ಸಾಕಣೆ ಪೆಟ್ಟಿಗೆಯನ್ನು ತರಲು ಹೋದ ಪ್ಯಾರ ಆಕಸ್ಮಿಕವಾಗಿ ಕಂಡ ಓತಿಕ್ಯಾತವನ್ನು ಕಂಡು ಹಾಸ್ಯ ಸನ್ನಿವೇಶವನ್ನು ಸೃಷ್ಟಿಯಾಗುತ್ತದೆ. ಇಲ್ಲಿ ಕತೆಯ ಮೂಲ ಉದ್ದೇಶ ಪ್ಯಾರನ ಮೂಢನಂಬಿಕೆಯಿಂದಲೇ ಪ್ಯಾರ ಹಾಸ್ಯಕ್ಕೀಡಾಗುವುದು ನಿರೂಪಕನ ತಂತ್ರವೆಂದೇ ಹೇಳಬೇಕು. ಇನ್ನು ಕೆಲವು ಪಾತ್ರಗಳು ಹಾಗೂ ಅವರ ಗುಣಸ್ವಭಾವಗಳೇ ಹಾಸ್ಯವೆಂಬಂತೆ ತೇಜಸ್ವಿಯವರು ಬಳಸಿದ್ದಾರೆ. 'ಅವಾಂತರದ ಸೀನಪ್ಪ' ಎಂಬ ಕತೆಯಲ್ಲಿ ಸೀನಪ್ಪ ತನ್ನ ಅರ್ಧಬರ್ಧ ಕೆಲಸ ಮಾಡುವ ಮೂಲಕ ಆ ಊರಿನಲ್ಲೇ ಗಾರೆ ಸೀನಪ್ಪ ತಿರುಪತಿ ಕ್ಷೌರ' ಎನ್ನುವ ನಾಣ್ಣುಡಿ ಹುಟ್ಟಿಕೊಂಡಿರುತ್ತದೆ. ತಿರುಪತಿ ಕ್ಷೌರ ಎಂದರೆ ಹೆಚ್ಚು ಚಾರ್ಜು ಮಾಡುವ ಎಂದು ತಿಳಿದಿದ್ದ. ನಿರೂಪಕರಿಗೆ ಅಣ್ಣೇಗೌಡರು ತಿರುಪತಿಯ ಕ್ಷೌರ ವಿವರಿಸಿದಾಗಲೇ ಅದು ಏನೆಂದು ತಿಳಿಯುತ್ತದೆ. "ತಿರುಪತಿಯಲ್ಲಿ ತಲೆಬೋಳಿಸಿ ಕೊಳ್ಳುವವರು ತುಂಬಾ ಜನ ಇದ್ದು ರಷ್ ಇದ್ದರೆ ಎಲ್ಲರಿಗೂ ಒಮ್ಮೆಗೆ ತಲೆ ಬೋಳಿಸಲಾಗದೆ ಕ್ಷೌರಿಕರು ತಮ್ಮ ಬಳಿಗೆ ಬಂದ ಗಿರಾಕಿಗಳಿಗೆಲ್ಲಾ ಬುರುಡೆಯ ಯಾವುದೋ ಒಂದು ಭಾಗದಲ್ಲಿ ಪಟ್ಟೆ ಹೊಡೆದಂತೆಯೇ ತ್ರಿಕೋನಾಕಾರವಾಗಿಯೇ ಬೋಳಿಸಿ ತಮ್ಮ ತಮ್ಮ ಗಿರಾಕಿಗಳನ್ನು ಬುಕ್ ಮಾಡುತ್ತಿದ್ದರು. ನಂತರ ಆ ಗಿರಾಕಿಗಳು ಬೇರೆಯವರ ಹತ್ತಿರ ಹೋಗಲು ಆಗದೆ ಮರಳಿ ಮನೆಗೂ ಹೋಗಲಾರದೆ ಪರದಾಡುವಂತೆ ಕ್ಷೌರಿಕರು ಕಾಟ ಕೊಡುತ್ತಿದ್ದರು" ಹಾಗೆಯೇ ಸೀನಪ್ಪನು ಸಹ ತನಗೆ ಕೆಲಸ ನೀಡಿದವರ ಮನೆಯಲ್ಲಿ ಅರ್ಧಬರ್ಧ ಕೆಲಸ ಮಾಡಿ ಮತ್ತಾರು ಆ ಕೆಲಸಕ್ಕೆ ಕೈ ಹಾಕದಂತೆ ಮಾಡುತ್ತಿದ್ದ. ಹೀಗೆ ಈ ಕಥೆಯಲ್ಲಿ ಸೀನಪ್ಪನ ಅವಾಂತರಗಳ ಬಗ್ಗೆ ಹೇಳುವುದಾದರೆ ಆ ಅವಾಂತರದ ಜೊತೆಗೆ ಹಾಸ್ಯವನ್ನು ನಿರೂಪಿಸುವುದು ತುಂಬ ಮುಖ್ಯವಾದ ಅಂಶವಾಗಿ ತೋರುತ್ತದೆ. ಹಾಗೆಯೇ ಎಂಗ್ಟನ ಪುಂಗಿಯಲ್ಲೂ ಸಹ ಎಂಗ್ಟನ ಹಾವು ಹಿಡಿಯುವ ವೃತ್ತಿಯನ್ನು ಆ ಹಾವು ಹಿಡಿಯುವ ಸನ್ನಿವೇಶಗಳು ಎಂತಹುದು, ಆ ಸನ್ನಿವೇಶವನ್ನು ಬಳಸಿ ಹಾಸ್ಯ ನಿರೂಪಿಸುವ ತಂತ್ರ ಬಹುಮುಖ್ಯವೆನಿಸುತ್ತದೆ. ಪುಂಗಿ ಊದಿ ಹಾವು ಹಿಡಿಯುವ ಎಂಗ್ಟನ ವೃತ್ತಿಯನ್ನು ನಿಜವೆಂದು ನಂಬಿದ್ದ ನಿರೂಪಕ ಕೊನೆಗೆ ಸ್ನೇಹಿತರ ಅಪಹಾಸ್ಯಕ್ಕೀಡಾಗುವುದು. "'ಎನ್ ಸ್ಸಾರ್ ನಿಮ್ಮಂಥಾ ಎಜುಕೇಟೆಡ್ಡು, ವಿಚಾರವಾದಿಗಳು, ಸೈಂಟಿಫಿಕ್ಕಾಗಿ ಯೋಚಿಸೋರು, ಧರ್ಮಸ್ಥಳಕ್ಕೆ ಹೋಗಿ ತಲೆ ಬೋಳಿಸಿ ಕೊಳ್ಳೂರನ್ನ ಲೇವಡಿ ಮಾಡ್ತಿದ್ರಿ ನೀವೇ ಹೀಗೆ

ಮೋಸಹೋದರೆ ಇನ್ನು ಹಳ್ಳಿಯವರು ಮಂತ್ರ, ತಂತ್ರ, ದಯ್ಯಾ, ದ್ಯಾವರು ಅನ್ನೋದರಲ್ಲಿ ಆಶ್ಚರ್ಯವಿಲ್ಲ ಬಿಡಿ. ಹಾವು ಸಂಗೀತ ಕೇಳಿ ಹತ್ತಿರ ಬರುತ್ತದೆ. ಎಂದರೆ ನೀವು ನಂಬ್ತಿರಲ್ಲಾ! ಹಾವಿಗೆ ಕೇಳೋದಕ್ಕೆ ಕಿವಿಯೇ ಇಲ್ಲಾ ಅನ್ನೋ ಸಿಂಪಲ್ ಫ್ಯಾಕ್ಟ್ ನಿಮಗೆ ಹೊಳೀಲಿಲ್ವಾ? ಎಂದು ಸಂಶೋಧನಾ ಕೇಂದ್ರದ ವಿಜ್ಞಾನಿ ಮಿತ್ರರು ಸಾಮೂಹಿಕವಾಗಿ ಅಪಹಾಸ್ಯ ಮಾಡಿದರು. ಒಟ್ಟಿನಲ್ಲಿ ನಾನು ಎಂಗ್ಟನ ವಿಚಾರ ಎತ್ತಿದಾಗಲೆಲ್ಲ ನನ್ನ ಮಿತ್ರರು ನಾನು ಮತಾಂತರ ಹೊಂದಿದವನಂತೆ ಪರಿಗಣಿಸಿ ನನ್ನನ್ನು ಟೀಕಿಸಿದರು. ಎಂಗ್ಟ ನನ್ನನ್ನು ಪರಿವರ್ತನೆ ಮಾಡಿದ ಮೂಢನಂಬಿಕೆಗಳ ವಕ್ತಾರನಾದ ಎಂದಾಗ ನಾಜೂಕಾದ ನವಿರಾದ ಭಾಷೆಯ ಮೂಲಕ ತಿಳಿಹಾಸ್ಯ ಓದುಗರಲ್ಲಿ ಕಾಣಬಹುದಾಗಿದೆ. ಹಾಗೆಯೇ ಅವರ ಪಾಕಕ್ರಾಂತಿ ಕತೆಯಲ್ಲಿ ಅಡುಗೆಯು ಸರಳ ಎಂದು ಹೇಳುತ್ತಾ ಹೊರಟ ನಿರೂಪಕ ಮೊದಲಿಗೆ ಹಾಲಿನಿಂದ ಬೆಸೆತ್ತು ಕೊನೆಗೆ ಕುಕ್ಕರ್ ಪ್ರೆಷರ್ ಜಾಸ್ತಿಯಾಗಿ ಒಡೆದುಹೋಗುತ್ತದೆ. ಆಕ್ಷಣದಲ್ಲಿ ಅಲ್ಲಿಗೆ ಬರುವ ಪೋಲಿಸರು ಅವರನ್ನು ನಕ್ಸಲೈಟ್ ಎಂದು ಮನೆಯಲ್ಲಿ ಬಾಂಬ್ ಇಟ್ಟಿದ್ದಾರೆಂದು ಹೇಳಿ ಸಂಶಯ ಪಡುವ ಸನ್ನಿವೇಶ ಅದನ್ನು ಸುಳ್ಳೆಂದು ಸಮರ್ಥಿಸಿಕೊಳ್ಳುವಲ್ಲಿ ಲೇಖಕರು ಪಡುವ ಪಾಡು ಹಾಗೆಯೇ ಅದನ್ನು ಪರೀಕ್ಷಿಸಲು ಹೋದ ಪೋಲಿಸ್ ಅವಸ್ಥೆ ನಿರೂಪಕನ ಭಾಷ ವೈಖರಿಯಿಂದಲೇ ಹಾಸ್ಯದ ಹೊನಲನ್ನು ಹರಿಸುತ್ತದೆ.

ಮೈಗಾಡ್ ಇದು ಸಿಂಪಲ್ ಕುಕ್ಕಿಂಗ್ ಆಕ್ಸಿಡೆಂಟ್ ತಡೀರಿ, ತಡೀರಿ ಮೊದಲು ಸ್ವೌಸ್ವಿಚ್ ಆಫ್ ಮಾಡುತ್ತೇನೆ ಎಂದ ಒಬ್ಬ ಪೋಲಿಸ್ ಅಧಿಕಾರಿಯ ಮೇಲೆ ನೋಡುತ್ತಾ ಅಡುಗೆಮನೆಯೊಳಗೆ ಒಂದು ಹೆಜ್ಜೆ ಇಟ್ಟ. ದುರ್ದೈವ ಅಲುಗಡ್ಡೆಯ ಅರೆಬೆಂದ ಹೋಳಿನ ಮೇಲೆ ಕಾಲೂರಿದ ಆತ ಜಾರಿ ಧಡೀರೆಂದು ನೆಲದ ಮೇಲಿದ್ದ ತಿಳಿಸಾರು, ಅನ್ನದ ಗಂಜಿಯ ಕೊಚ್ಚೆಯ ಮೇಲೆ ಬಿದ್ದ. ಪೋಲಿಸ್ ಅಧಿಕಾರಿಯನ್ನು ಎತ್ತಿ ನಿಲ್ಲಿಸಿ ನಿರೂಪಕರು ಕೊಡುವ ಕಾರಣಗಳು ಹಾಸ್ಯದ ಹೊನಲು ಹರಿಯುತ್ತದೆ. ಇಲ್ಲಿ ಮುಖ್ಯವಾಗಿ ಪಾಕದ ವೈಖರಿಯಿಂದ ನಿರೂಪಕರಿಗಾದ ತೊಂದರೆಯ ಜೊತೆ ಹಾಸ್ಯವನ್ನು ಬಳಸಿರುವ ತಂತ್ರ ವಿಭಿನ್ನ ಎಂದೇ ಹೇಳಬೇಕು. ಹಾಗೆಯೇ ತಮ್ಮ 'ಸಂತೆ' ಎಂಬ ಕತೆಯಲ್ಲಿ ಸಂತೆ ಹೇಗೆ ನಡೆಯುತ್ತದೆ ಹಾಗೂ ಸಂತೆಯಲ್ಲಿ ನಡೆಯುವ ವ್ಯಾಪಾರ ಎಂತಹುದು ಎಂದು ಹೇಳುವಾಗ ಅವರು ಬಳಸುವ ಭಾಷೆಯಲ್ಲಿ ನಾವು ಹಾಸ್ಯವನ್ನು ಕಾಣಬಹುದಾಗಿದೆ. "ನನ್ನ ಹೆಂಡತಿಯಂತೂ ಸಂತೆ ವ್ಯಾಪಾರಕ್ಕೆ ನಾನು ನಾಲಾಯಕ್ ಮನುಷ್ಯನೆಂದು ತೀರ್ಮಾನಿಸಿದ್ದಾಳೆ. ಅವಳ ಪ್ರಕಾರ ನಾವು ಕಾರಿನಲ್ಲೋ, ಸ್ಕೂಟರಿನಲ್ಲೋ ಟ್ರಿಮ್ಮಾಗಿ ಸಂತೆಗೆ ಹೋಗುವುದು ತಪ್ಪು. ಆದ್ದರಿಂದಲೇ ಸಂತೆ ಮಾರಾಟಗಾರರು ಬೆಲೆ ಹೆಚ್ಚಿಗೆ ಹೇಳುತ್ತಾರೆಂದು ಅವಳ ಭಾವನೆ. ಇದರಲ್ಲಿ ಸತ್ಯಾಂಶ ಇರಬಹುದು. ಆದರೇನು ಮಾಡುವುದು! ಸಂತೆಗಳಲ್ಲಿ ಬಡವರೆಂದು ತೋರಿಸಿಕೊಳ್ಳಲು ನಾವು ಹರಕಲು ಬಟ್ಟೆ ಕೊಳಕು ಚೀಲಗಳ ಸಂತೆ ಯೂನಿಫಾರಂ ಒಂದನ್ನು ಧರಿಸಿ ಫ್ಯಾನ್ಸಿ ಡ್ರೆಸ್ ಮಾಡಿಕೊಂಡು ಹೋಗಲಾಗುತ್ತದೆಯೇ? ಎಂಬಲ್ಲಿ ಅವರ ನಿರೂಪಣಾ ತಂತ್ರದ ಮೂಲಕವೇ ತಿಳಿಹಾಸ್ಯ ಓದುಗರಲ್ಲಿ ಮೂಡಿಸುತ್ತಾರೆ. ಹೀಗೆ ತೇಜಸ್ವಿಯವರ ನವೀರಾದ ಭಾಷೆಯ

ಮೂಲಕ ತಿಳಿಹಾಸ್ಯ ತಮ್ಮ ಕತೆಗಳಲ್ಲಿ ತಂದಿರುವುದು ಅವರ ಹಾಸ್ಯ ನಿರೂಪಣಾ ತಂತ್ರದ ವೈಖರಿಯಾಗಿದೆ.

ಹೀಗೆ ತೇಜಸ್ವಿಯವರು ತಮ್ಮ ಅದ್ಭುತ ಕಥನ ಕೌಶಲದಿಂದ ಹಾಸ್ಯದ ಸ್ವರೂಪ ಹಾಗೂ ಬಗೆಗಳನ್ನು ಅದನ್ನು ವ್ಯಕ್ತಪಡಿಸುವಲ್ಲಿ ಅವರು ಬಳಸಿರುವ ತಂತ್ರ ಅದ್ಭುತವೆಂದು ಹೇಳಬೇಕು. ಯಾವುದೇ ಕಥೆ ಹೇಳುವಲ್ಲಿ ಪರಿಣತನಾದರೆ ಸಾಲದು ಆ ಕತೆಯನ್ನು ಹೇಳುವಲ್ಲಿ ನವರಸಗಳನ್ನು ಯಾವ ರೀತಿ ಬಳಸಿಕೊಂಡಿದ್ದಾರೆ ಎಂಬುದು ತುಂಬ ಮುಖ್ಯವಾದ ಅಂಶ. ಹಾಗೆಯೇ ಆ ನವರಸಗಳು ಸನ್ನಿವೇಶಕ್ಕೆ ತಕ್ಕಂತೆ ಬಳಕೆಯಾದರೆ ಆ ಕತೆಗಾರನ ಬರವಣಿಗೆ ಅದ್ಭುತ ಹಾಗೂ ಸ್ವಾರಸ್ಯಕರ. ಇಂತಹ ಅಪೂರ್ವ ಕಲೆಯನ್ನು ಚಿಂತನಾ ಶೈಲಿಯನ್ನು ನಾವು ತೇಜಸ್ವಿಯವರ ಕತೆಗಳಲ್ಲಿ ಕಾಣಬಹುದು. ಅವರು ಪ್ರತ್ಯೇಕವಾಗಿ ಹಾಸ್ಯವನ್ನೇ ಹೇಳದೆ ಕತೆಯ ಮುಖ್ಯವನ್ನಾಗಿಸಿ ಜೊತೆಗೆ ಹಾಸ್ಯದ ಮೂಲಕ ಅದಕ್ಕೆ ಮತ್ತಷ್ಟು ಮೆರಗನ್ನು ನೀಡಿದ್ದಾರೆ.

## ಅಡಿ ಟಿಪ್ಪಣಿ

೧. ಅ.ನ.ಕೃಷ್ಣರಾಯ : ಸಾಹಿತ್ಯ ಮತ್ತು ಜೀವನ ಪುಟ–೯೫

೨. ಪೂರ್ಣಚಂದ್ರ ತೇಜಸ್ವಿ : ಪರಿಸರ ಕತೆ, ಪುಟ–೮

೩. ಪೂರ್ಣಚಂದ್ರ ತೇಜಸ್ವಿ : ಪರಿಸರ ಕತೆ, ಪುಟ–೨೭

೪. ಪೂರ್ಣಚಂದ್ರ ತೇಜಸ್ವಿ : ತಬರನ ಕಥೆ, ಪುಟ–೯

೫. ಪೂರ್ಣಚಂದ್ರ ತೇಜಸ್ವಿ : ಹುಲಿಯೂರಿನ ಸರಹದ್ದು, ಪುಟ–೪೬

೬. ಪೂರ್ಣಚಂದ್ರ ತೇಜಸ್ವಿ : ಅಬಚೂರಿನ ಪೋಸ್ಟಾಫೀಸು, ಪುಟ–೯

೭. ಪೂರ್ಣಚಂದ್ರ ತೇಜಸ್ವಿ : ಅಬಚೂರಿನ ಪೋಸ್ಟಾಫೀಸು, ಪುಟ–೨೪

# ಅಧ್ಯಾಯ –೬

## ತೇಜಸ್ವಿ ಕಥೆಗಳಲ್ಲಿ ಹಾಸ್ಯ ಮತ್ತು ವಿಡಂಬನೆ

ಹಾಸ್ಯವೆಂಬುದು ಮಿಂಚಿನಂತೆ, ಅದನ್ನು ಬೆಳಕಾಗಿ ಉರಿಸಲಾಗದು. ಆದರೆ ಅದು ಅಂಧಕಾರಮಗ್ನರಿಗೆ ಕ್ಷಣ ಮಾತ್ರ ಪರಿಸ್ಥಿತಿಯನ್ನು ತೋರುತ್ತದೆ, ಇದೆ ಹಾಸ್ಯ. ಹಾಸ್ಯ ನಿರ್ಮಲವಾಗಿ ಇದ್ದರೆ, ಹಾಸ್ಯ ಅಪಹಾಸ್ಯವಾಗಿ ವಿಘಾತವಾಗಿ ಪರಿಣಮಿಸುತ್ತದೆ. ಶಸ್ತ್ರವೈದ್ಯನ ಶಸ್ತ್ರದಂತೆ ಹಾಸ್ಯ. ಕಂಡದ್ದು ಕಾಣಿಸದ ಹಾಗೆ ಕಾಣಿಸಿದರೆ, ಕಬ್ಬಿಣದಂತಹ ಸ್ನೇಹ. ಹಾಸ್ಯವು ವಿಕಟತನವಲ್ಲ. ಕೇವಲ ಕುಚೋದ್ಯಕ್ಕಾಗಿ ಪರಿಣಾಮದ ಕಡೆಗೆ ಲಕ್ಷ್ಯಕೊಡದೆ ಮಾಡಿದ ಹಾಸ್ಯ ಬಹುವೇಳೆ ಅನರ್ಥಕಾರಿ. ಹಾಸ್ಯ ಎಂದರೇನು? ತಾನೇ ತಾನಾಗಿ ಹೊರಹೊಮ್ಮುವ ಈ ಭಾವಕ್ಕೆ ಒಂದು ಲಕ್ಷಣ ವಾಕ್ಯದ ಅಗತ್ಯವಿದೆಯೇ? ಈ ಬಗ್ಗೆ ಹೆಚ್ಚಿನ ಪರಿಶೀಲನೆಗೆ ಹೋಗಬಾರದು ಎನ್ನುತ್ತಾ ನಮ್ಮ ಲಾಂಗೊಲಾಚಾರ್ಯರು ಹೀಗೆ ಹೇಳುತ್ತಾರೆ. "ಸ್ವಾಮಿ ಲಕ್ಷಣ ವಾಕ್ಯಗಳು ಲಕ್ಷ್ಯಗಳನ್ನು ನಾಶ ಮಾಡುತ್ತವೆ. ಆದರೂ ನಿಮಗೆ ಲಕ್ಷಣ ವಾಕ್ಯದ ಹಟವೇ ಇದ್ದರೆ ಪ್ರಯತ್ನ ಮಾಡುವಾ"[1] ಹೀಗೆನ್ನುತ್ತಾ ಲಾಂಗೊಲಾಚಾರ್ಯರು ಹಾಸ್ಯಕ್ಕೆ ಈ ಡೆಫಿನಿಶನ್ ಕೊಡುತ್ತಾರೆ. "ಹಾಸ್ಯ ಎಂದರೆ ಬಹುತರವಾಗಿ ಮನುಷ್ಯ ಎಂಬ ಪಶುವಿನ ಮುಖವೆಂಬ ಅವಯವವನ್ನು ನಿಯಂತ್ರಿಸುವ ಸುಮಾರು ೩೦೦ ಸ್ನಾಯುಗಳ ಆಕುಂಚನ–ಪ್ರಸರಣಗಳಿಂದ ಉಂಟಾಗಬಲ್ಲ ವಿಶಿಷ್ಟ ಮುಖ ವಿಕಾರವನ್ನು, ಕೆಲ ವೇಳೆ ಅದರ ಸಂಗಡವೇ ಅದೇ ಪಶುವಿನ ಶ್ವಾಸಕೋಳಗಳೆಂಬ ಗಾಳಿ ಚೀಲಗಳ ಜಾಲದಿಂದ ಗಂಟಲೆಂಬ ಸುರಂಗದೊಳಗಿನ ಧ್ವನಿಪೆಟ್ಟಿಗೆಯ ಮೂಲಕ ಬಾಯಿ ಎಂಬ ಬಿಲದ್ವಾರದಿಂದ ಸಶಬ್ದವಾದ ವಾಯು ವಿಸ್ಫೋಟವನ್ನು ಉತ್ಪಾದಿಸಲು ಕಾರಣವಾಗುವಂಥ ಮಾತು ಅಥವಾ ಸನ್ನಿವೇಶ"[2] ಹೀಗೆ ವೈಜ್ಞಾನಿಕವಾಗಿ ಹಾಸ್ಯವನ್ನು ವಿವರಿಸುವಲ್ಲಿ ಲಾಂಗೂಲಾಚಾರ್ಯರಿಗೆ ಎಂತಹ ಹಾಸ್ಯಪ್ರಜ್ಞೆ ಇದೆ ಎಂಬುದನ್ನೇ ಗುರುತಿಸಬಹುದಾಗಿದೆ.

ಹಾಸ್ಯವು ಮಾನವ ಸಂಸ್ಕೃತಿಯ ಧ್ಯೋತಕವಾಗಿರಿವುದನೋ ಸರಿ. ಆದರೆ ಜಗತ್ತಿನ ಎಲ್ಲಾ ಜನಾಂಗಗಳ ಒಂದೇ ಸಾಂಸ್ಕೃತಿಕ ಮಟ್ಟಕ್ಕೆ ಬಂದು ತಲುಪಿಲ್ಲವಾದ್ದರಿಂದ ಹಾಸ್ಯವು ಆ ಸಂಸ್ಕೃತಿಯ ಅಂಕುಡೊಂಕುಗಳನ್ನು ವಿವೇಚಿಸುತ್ತದೆ. ಹಾಸ್ಯ ಬುದ್ಧಿಗಮ್ಯವಾಗಿರುವುದರಿಂದ ವಿಚಾರಶಕ್ತಿಯುಳ್ಳ ಹಾಸ್ಯಕಾರನಿಗೆ ಜಗತ್ತೊಂದು ವಿಚಿತ್ರ ಸ್ವಭಾವದ ಜನರ ಗುಂಪಾಗಿ ಕಾಣಿಸಿಕೊಳ್ಳುತ್ತದೆ. ಅದನ್ನು ಕತೆಗಾರ ತನ್ನ ಕಥನ ಕೌಶಲಗಳ ಮೂಲಕ ಸನ್ನಿವೇಶಕ್ಕೆ ತಕ್ಕಂತ ಹಾಸ್ಯವನ್ನು ಕಥೆಗಳಲ್ಲಿ ತರುತ್ತಾನೆ. ಕಥೆಗಾರನ ಕಣ್ಣಿಗೆ ಜಗತ್ತೊಂದು ವಿರೋಧಾಭಾಸ, ಹುಚ್ಚರ ಸಂತೆ. ಅಪೂರ್ಣತೆಯ ಅಗರ. ಪರಿಪೂರ್ಣವಾದ ದೇವನು ಅಪರಿಪೂರ್ಣವಾದುದಕ್ಕೆ ಹೋಲಿಸಿ ನೋಡಿದಾಗ ತಾರತಮ್ಯಭಾವ ಮೂಡಿ ನಿಲ್ಲುತ್ತದೆ. ಆಗ ನಮಗೆ ನಗೆ ಮೂಡುತ್ತದೆ. ಹಾಸ್ಯದ ನಗೆ ಕಾಲ, ಸನ್ನಿವೇಶಗಳಿಗೆ ಅನುಗುಣವಾಗಿ ರೂಪ ಧರಿಸಿ ನಿಂತಿದೆ. ಒಬ್ಬರ ಹುಚ್ಚುತನ ನೋಡಿನಕ್ಕು, ಇನ್ನೋಬರು ಜಾಣರಾಗಬಹುದೆ. ಇದೆ ನಗೆಯ ನಡತೆ, ಹಾಸ್ಯದ ಗುರಿ.

ಇಂತಹ ಒಂದು ಹಾಸ್ಯದ ವೈಖರಿಯನ್ನು ನಾವು ತೇಜಸ್ವಿಯವರ ಕಥೆಗಳಲ್ಲಿ ಕಾಣಬಹುದಾಗಿದೆ. ಎಂತಹ ಸನ್ನಿವೇಶದಲ್ಲೂ ತಿಳಿಹಾಸ್ಯ, ಗಂಭೀರಹಾಸ್ಯಗಳನ್ನು ತರಬಲ್ಲ ಇವರ ಜಾಣ್ಮೆ ಅಪೂರ್ವವಾದುದು. ಇವರ ಹಾಸ್ಯ ಹೆಚ್ಚು ವಿಡಂಬನಾತ್ಮಕವಾದುದು. ಮೊದಲಿಗೆ ವಿಡಂಬನೆ ಎಂದರೆ ತಪ್ಪು ಮಾಡಿದವನ ತಪ್ಪನ್ನು ನಗೆಮಾತಿನಲ್ಲಿ ಎತ್ತಿತೋರಿಸಿ, ಹೀನಾಯಮಾಡಿ ನಗುವವನೇ ವಿಡಂಬಕ. ವಸ್ತುವನ್ನು ಕೆದಕಿ, ಅದರಲ್ಲಿರುವ ಕುಂದುಕೊರತೆಗಳನ್ನು ಕಂಡು ಹಿಡಿದು ಆ ವಸ್ತುವನ್ನೇ ಪರಿಹಾಸಕ್ಕೆ ಗುರಿ ಮಾಡುವುದು ವಿಡಂಬನೆ. ಪರಮಾತ್ಮನ ಸೃಷ್ಟಿ ಪರಿಪೂರ್ಣವಾಗಿಲ್ಲ. ಯಾವುದನ್ನು ನೋಡಿದರೂ ಅಪೂರ್ಣತೆ ಕಾಣಿಸುತ್ತದೆ. ಪರಿಪರೂರ್ಣವಾ ಪರಮಾತ್ಮನೇ ಇಂತಹ ಅಪೂರ್ಣವಾಧ ಸೃಷ್ಟಿಯನ್ನು ನಿರ್ಮಿಸಿದ ಮೇಲೆ ಮಾನವ ಕಲ್ಪಿತ ದೇವರಾದರೂ ಹೇಗೆ ಪೂರ್ಣವಾಗಬಲ್ಲನು? ಅವನೂ ಅಪೂರ್ಣನೆ ಸರಿ.

"ನೀನ್ಯಾಕೋ ನಿನ್ನ ಹಂಗ್ಯಾಕೋ" ಎಂದು ದಾಸರು ಪರಮಾತ್ಮನ ಕೂಡ ಸರಸವಾಡಿಲ್ಲವೆ. ಯಾರಾದರೇನು ಅದು ವ್ಯಕ್ತಿಯೇ ಆಗಿರಲಿ, ಶಕ್ತಿಯೇ ಆಗಿರಲಿ, ತಪ್ಪು ದಾರಿ ಹಿಡಿದರೆ ಸಾಕು ವಿಡಂಬಕನು ತಾನು ಮಾಡಬೇಕಾದ ಕಾರ್ಯವನ್ನು ಮಾಡಿಯೇ ಬಿಡುತ್ತಾನೆ. ವಿಡಂಬಿಸುವುದು ಮಾನವನ ಸಹಜ ಸ್ವಭಾವ. ವಿಡಂಬನೆಗೆ ಗುರಿಯಾಗುವುದು ಎಡವಿದ ಹಾದಿ. ಅಣಕವೇ ವಿಡಂಬನೆಯ ಬೀಜ. ನಮ್ಮ ಮಾತಿನಲ್ಲಿರುವ ವಿಡಂಬನೆಯನ್ನು ಕವಿಯಾದವನು ತನ್ನ ಪ್ರತಿಭಾ ಬಲದಿಂದ ಅತಿ ರಮಣೀಯವಾಗಿ ಚಿತ್ರಿಸುವನು. ಕವಿಯು ವಿಡಂಬನೆಯನ್ನು ಲೀಲಾಜಾಲವಾಗಿಯೇ ಮಾಡುವುದರಿಂದ ಅವನ ನಗೆಯ ತುಸು ಲೀಲಾಜಾಲವಾಗಿಯೇ ತೋರುವುದು. ಅದೇ ನಿಜವಾದ ವಿಡಂಬನೆ.

ವಿಡಂಬನೆ ಅನ್ಯರಲ್ಲಿರುವ ಡಾಂಬಿಕತನವನ್ನು ಬೈಲಿಗೆಳೆದು ತಿದ್ದಿ, ಸಮಾಜದ ಸ್ವಾಸ್ಥ್ಯವನ್ನು ಕಾಯುತ್ತದೆ. ದುರ್ಜನರ ದುರ್ಗಣಗಳು ವಿಡಂಬನೆಯ ರಾವುಗನ್ನಡಿಯಲ್ಲಿ ಮೆರೆದು ಮರೆಯಾಗುತ್ತವೆ. ವಿಡಂಬನ ಕವಿಗೆ ಅನ್ಯರ ಹುಚ್ಚುತನವೇ ಕಥಾವಸ್ತುವಾಗುವುದು. ಇಂತಹ ಒಂದು ವಿಡಂಬನಾತ್ಮಕ ಹಾಸ್ಯ ವೈಖರಿಯನ್ನು ಬಳಸಿಕೊಂಡವರು ತೇಜಸ್ವಿ, ಅವರು ತಮ್ಮ ಕಥೆಗಳ ಮೂಲ ಉದ್ದೇಶಕ್ಕೆ ಧಕ್ಕೆ ಬಾರದಂತೆ ಈ ವಿಡಂಬನೆಯನ್ನು ಹಾಸ್ಯದ ಮೂಲಕ ಹೇಳುತ್ತಾರೆ. ಅವರ ಕಥೆಗಳಲ್ಲಿ ಬರುವ ಹಳ್ಳಿಯ ವ್ಯಕ್ತಿಗಳ ಡಾಂಬಿಕ ವಿಚಾರಗಳೇ ಅವರ ವಿಡಂಬನೆಗೆ ಗುರಿಯಾಗುವಂತಹದು. ಇದರ ಮೂಲಕ ಓದುಗರಲ್ಲಿ ಹಾಸ್ಯವನ್ನು ತರುವಂತಹ ಕಥನಕೌಶಲ್ಯ ಅವರದು. ಅವರು ಕಥೆಗಳಲ್ಲಿ ವಿಡಂಬನೆಯನ್ನು ಮಾಡುವುದು ಒಂದು ರೀತಿಯಲ್ಲಿ ಡಾಂಬಿಕತನವನ್ನು ಹೋಗಲಾಡಿಸಲು ಇಂತಹ ಡಾಂಬಿಕತೆಯನ್ನು ಪ್ರದರ್ಶನ ಮಾಡಿ ನಗೆಗೀಡಾಗುವರು, ಹೆಚ್ಚಾಗಿ ಅನಕ್ಷರಸ್ಥರಾದರೆ ಕೆಲವೊಮ್ಮೆ ಅಕ್ಷರಸ್ಥರು ಅವರ ಕಥೆಗಳಲ್ಲಿ ನಮಗೆ ಕಾಣಸಿಗುತ್ತಾರೆ.

ಉದಾಹರಣೆಗೆ :- ಅವರ 'ಪರಿಸರದ ಕಥೆ'ಗಳಲ್ಲಿ ಒಂದಾದ 'ಕುಕ್ಕಟ ಪಿಶಾಚ'ಕಥೆಯಲ್ಲಿ ಮಾರ ತಾನು ಬರುವ ಹಾದಿಯಲ್ಲಿ ಒಂದು ಕೋಳಿ ಇದೆಯೆಂದು ಅದು ಮನುಷ್ಯರನ್ನು ಕಂಡರೆ ಸಾಕು ವಿಚಿತ್ರವಾಗ ವರ್ತಿಸುತ್ತದೆಂದು ಅದನ್ನು ಹಿಡಿಯಲು ಹೋದ ಅವನನ್ನು ಗುಂಡಿಯೊಳಗೆ ಬೀಳಿಸಿತೆಂದು

ಆದ್ದರಿಂದ ಅದರೊಳಗೆ ದೆವ್ವವಿದೆ ಎಂದು ಹೇಳುತ್ತಾನೆ. ಅದಕ್ಕೆ ಲೇಖಕರು "ಕುಡಿದು ಗುಂಡಿಗೆ ಬಿದ್ದು ಈ ದೆವ್ವ ಕಾಟ ಕೊಡ್ತು ಅಂತ ಹೇಳ್ತಿಯೇನೋ? ಎಂದು ಜೋರು ಮಾಡಿತ್ತಾರೆ. ಮಾರನ ಮಾತಿನ ಹಿಂದೆ ಏನೋ ಕೌತುಕದ ಘಟನೆಗಳಿವೆ ಎಂದು ಅದನ್ನು ಪೂರ್ಣವಾಗಿ ತಿಳಿಯಲು ಅವರು ಅಲ್ಲಿಗೆ ತೆರಳಿದಾಗ ಆ ಕಾಡುಕೋಳಿ ತಾನಿಟ್ಟ ಮೊಟ್ಟೆಗಳನ್ನು ಕಾಪಾಡಿಕೊಳ್ಳಲು ಹಾಗೆ ವಿಚಿತ್ರ ರೀತಿಯಲ್ಲಿ ವರ್ತಿಸುತ್ತಿದೆ ಎಂದು ತಿಳಿದುಕೊಳ್ಳುತ್ತಾರೆ. ಮಾರನ ಡಾಂಭಿಕತೆಯ ಬಗ್ಗೆ ಹೇಳುತ್ತಾ ಅವರು, "ನಡೆದ ಘಟನೆಯನ್ನು ಮಾರ ತನ್ನದೆ ಆದ ರೀತಿಯಲ್ಲಿ ಅರ್ಥಮಾಡಿಕೊಂಡು ಕತೆ ಕಟ್ಟಿದ್ದ. ದೆವ್ವ ಈ ರೀತಿ ಕೋಳಿ ರೂಪ ತಾಳಿ ತೊಂದರೆ ಕೊಟ್ಟಿತೆನ್ನುವ ತೀರ್ಮಾನದ ದೆಸೆಯಿಂದಲೇ ಅವನು ಕಂಡ ಸತ್ಯವನ್ನು ಮಾರ ನಂಬಲಸಾಧ್ಯವಾಗುವಂತೆ ಮಾಡಿದ್ದ"[3] ಎಂಬಲ್ಲಿ ಮಾರನ ಡಾಂಭಿಕ ಡೊಂಕನ್ನು ತಿಳಿಹಾಸ್ಯದ ಮೂಲಕ ಹೇಳುತ್ತಾರೆ. ಹಾಗೆಯೇ "ಮೂಲಿಕೆಯ ಬಳ್ಳಿಯ ಸುತ್ತ" ಎಂಬ ಕತೆಯಲ್ಲಿ ಆಕಸ್ಮಿಕ ಮಳೆಗಾಲದಲ್ಲಿ ಬೆಳೆಯುವ ಬಳ್ಳಿ ಆಕಸ್ಮಿಕ ಸಿಕ್ಕಾಗ ಅದನ್ನು ಮಾರ ಚಿಕ್ಕ ಮರ ಒಂದಕ್ಕೆ ಸುತ್ತಿ ಕಟ್ಟುತ್ತಾನೆ. ಆಗ ಲೇಖಕರು

"ಯಾಕೋ ಮಾರ ಆ ಬೀಳನ್ನು ಗಿಡಕ್ಕೆ ಗಂಟು ಹಾಕಿದ್ದೀಯಾ" ಎಂದು ಕೇಳಿದೆ.
ಕಳ್ಮಂಡೇದು ಅಲ್ಲಿ ಬಿದ್ದಿರ್ಲಿ ಅಂತ ಎಂದ
ಯಾಕೋ ಅದು ಎಲ್ಲಿಗೆ ಓಡೋಗ್ತದೇ

ಅಯ್ಯೋ ಈ ಬೀಳಿನ ವಿಚಾರ ನಿಮಗೆ ಗೊತ್ತಿಲ್ಲ. ಅದು ಬೇಕಾದಾಗ ಬೇಕಾದೋರಿಗೆ ಸಿಗಬಾರ್ದು ಅಂತ ಒಬ್ಬ ರುಸಿ ಶಾಪ ಇದೆ. ಎಂದು ಕಟ್ಟುಕತೆಯನ್ನು ಹೇಳುತ್ತಾನೆ. ಆದರೆ ಅದರ ಬಗ್ಗೆ ಶೋಧನೆ ಮಾಡಿದ ನಿರೂಪಕರು ಆ ಬೀಳಿಗೆ ಮಾನವನ ದೇಹದಲ್ಲಿ ಇರುವ ರೋಗಗಳನ್ನು ಶಮನ ಮಾಡುವ ಶಕ್ತಿ ಇದೆ ಎಂದು ತಿಳಿಯುತ್ತದೆ. ಮತ್ತೇ ಅದೇ ಬಳ್ಳಿಯು ಉಪಯೋಗದ ಸಂದರ್ಭ ಬಂದಾಗ ಮರನ ಹಾಗೂ ಲೇಖಕರ ಸಂಭಾಷಣೆ ಹಾಸ್ಯವನ್ನು ಸ್ಫುರಿಸುತ್ತದೆ.

"ಯಾವುದು ಕೈಗೆ ಸಿಗ್ತದೆ ಅಂತ ಹ್ಯಾಗೆ ಹೇಳೋದ್ರಯ್ಯ'
ಆಕಸ್ಮಾತ್ ಗ್ರಹಚಾರ ಕೆಟ್ಟು ಜೀವ ತೆಗೆಯೋ ಗಿಡ ಕೈಗೆ ಬಂದರೆ
"ಹಾಂಗಾದರೆ ನಂಗೆ ಯಾಕೋ ಹೇಳ್ತಿಯ?
"ನೀವು ತಾನೇ ಸುಳ್ಳು ಅಂತ ಹೇಳ್ತಿರೋದು? ನಿಮಗೆ ನಂಬಿಕೆ ಇಲ್ವಲ್ಲ?
"ಆಕಸ್ಮಾತ್ ನಿನ್ನ ಹುಡಗನ್ನ ಮಾಡೋ ಅಂತ ಮೂಲಿಕೆ ಸಿಕ್ಕರೆ ಏನ್ಮಾಡ್ತಿಯಾ?
"ಅದು ಸಿಕ್ಕಿದರೂ ನನಗೆ ಬ್ಯಾಡ, ಹುಡುಗ ಆದರೆ ಮತ್ತೆ ಮದುವೆ ಆಗಬೇಕಲ್ಲ."

ಇಲ್ಲಿ ತೇಜಸ್ವಿಯವರು ಮಾರನ ಮೂಢನಂಬಿಕೆಯನ್ನು ಶೋಧಿಸಿ ಅದಕ್ಕೆ ವೈಚಾರಿಕ ಹಾಗೂ ವೈಜ್ಞಾನಿಕ ಕಾರಣಗಳನ್ನು ಓದುಗರ ಮುಂದಿಡುತ್ತಾ ಮಾರನನ್ನು ವಿಡಂಬನಾತ್ಮಕವಾಗಿ ಓದುಗರಿಗೆ ಕಟ್ಟಿಕೊಡುವ ಹಾಸ್ಯ ವೈಖರಿಯನ್ನು ಕಾಣಬಹುದು.

ಹಾಗೆಯೇ "ಕಾಳಪ್ಪನ ಕೋಬ್ರ" ಎಂಬ ಕಥೆಯಲ್ಲಿ ಪೇಟೆಯಿಂದ ಹಳ್ಳಿಗೆ ಬಂದ ಕಾಳಪ್ಪನ ಅರೆಬರೆ ಇಂಗ್ಲೀಷಿನಿಂದ ಹಾವಿಗೆ ಕೋಬ್ರ ಎಂದು ಹೇಳುತ್ತಾನೆ. ಆದರೆ ಒಮ್ಮೆ ಅವನ ಮನೆಯಲ್ಲಿ ಹಾವು ಸೇರಿಕೊಳ್ಳುತ್ತದೆ. ಆಗ ನಿರೂಪಕರು ಕಾಳಪ್ಪನ ಮನೆಗೆ ಕೋಬ್ರ ಬಂದಿದೆ ಎಂದಾಗ ಅವರಿಗೆ ಕೋಬ್ರ ಎಂದರೆ ಪಂಜುರ್ಲಿಯ ಹಾಗೆ ಅದು ಒಂದು ದೆವ್ವ ಇರಬಹುದು ಎಂದು ಊಹಿಸುತ್ತಾರೆ. ಆದರೆ ನಂತರದಲ್ಲಿ ಅವರಿಗೆ ಅದು ಹಾವು ಎಂದು ತಿಳಿಯುತ್ತದೆ. ಅದಕ್ಕೆ ಕಾಳಪ್ಪನ ಮನೆಯಲ್ಲಿ ಪೂಜೆ ಪುನಸ್ಕಾರಾದಿಗಳೂ ಮಾಡಿದರು ಸಹ ಭೈರಪ್ಪ ಹಾವು ಕಚ್ಚಿ ಸಾಯುತ್ತಾನೆ. ಆಗ ನಿರೂಪಕರು ಹೇಳುವ ಮಾತು ಮೂಢನಂಬಿಕೆಯ ವಿರುದ್ಧ ಇರುವ ಅವರ ವೈಚಾರಿಕ ನಿಲುವುಗಳನ್ನು ಹಾಸ್ಯದ ಮೂಲಕ ಹೇಳುತ್ತವೆ.

"ಮನೆಯೊಳಗೆ ತಿರುಗುತ್ತಿದ್ದ ಈ ವಿಷಸರ್ಪವನ್ನು ನಾಗರಹಾವು ಬ್ರಾಹ್ಮಣ ಅಂತೆ ಎಂದು ಹಾಗೆ ಬಿಟ್ಟಿದ್ದ. ಕಟ್ಟೆಗೆ ಸಂದಿಯಲ್ಲಿದ್ದ ಹಾವು ಭೈರಪ್ಪನನ್ನು ಕಚ್ಚಿ ಸತ್ತೇಹೋದ. ಮನುಷ್ಯರಿಗೆ ಹೊಸ ವಿಲಕ್ಷಣ ಪದಗಳ ಬಗ್ಗೆ ವ್ಯಾಮೋಹವಿರುತ್ತೇ ಸರ್ಪ, ನಾಗರಹಾವು ಎಂದೆಲ್ಲಾ ಹಾವನ್ನು ಕರೆಯುತ್ತಿದ್ದ ಬಹುಪಾಲು ಹಳ್ಳಿಗರು ಕಾಳಪ್ಪನ ದೆಸೆಯಿಂದ ಹಾವಿಗೆ ಕೋಬ್ರ ಎಂದು ಕರೆಯಲು ಶುರುಮಾಡಿದರು. ನಾಗರಪೂಜೆ; ಕೋಬ್ರಪೂಜೆಯಾಯಿತು. ನಾಗರಕಲ್ಲು ಕೋಬ್ರಕಲ್ಲು ಆಯಿತು"[೬] ಹೀಗೆ ತೇಜಸ್ವಿಯವರ ಒಬ್ಬರ ಕೊಂಕನ್ನು ಎತ್ತಿತೋರುವುದು ಹಾಸ್ಯವೇ ಆದರೂ ಅದರ ಹಿಂದಿರುವ ಅವರ ವೈಜ್ಞಾನಿಕ ದೃಷ್ಟಿಕೋನ ಶೋಧನಾ ಮನೋಭಾವ ಯಾವುದನ್ನೇ ಆಗಲಿ ಓರೆಹಚ್ಚಿ ನೋಡುವ ಗುಣ ಓದುಗರಿಗೆ ಮೂಢನಂಬಿಕೆ ಹಾಗೂ ವಿಜ್ಞಾನಕ್ಕೆ ಇರುವ ವ್ಯತ್ಯಾಸವನ್ನು ನಿರ್ದಿಷ್ಟವಾಗಿ ಹೇಳುವಲ್ಲಿ ಅವರು ಹಾಸ್ಯವನ್ನು ಬಳಸಿಕೊಂಡಿರುವ ರೀತಿ ವಿಭಿನ್ನ ಎಂದು ಹೇಳಬೇಕು.

### ೬.೧ ಹಾಸ್ಯಪ್ರಸಂಗಗಳಲ್ಲಿ ಬರುವ ಪಾತ್ರಗಳ ವಿಶ್ಲೇಷಣೆ:-

ಪ್ರಾಚೀನ ಕಾಲದಲ್ಲಿ ಹಾಸ್ಯವನ್ನು ತರಬೇಕಾದರೆ ಮುಖ್ಯವಾಗಿ ಅದಕ್ಕೆಂದೇ ಕೆಲವು ಪಾತ್ರಗಳು ಸೃಷ್ಟಿಯಾಗುತ್ತಿದ್ದವು. ಉದಾಹರಣೆಗೆ: ವಿದೂಷಕ ಹಾಸ್ಯವನ್ನು ಬಿಂಬಿಸಲಿಕ್ಕಾಗಿ ಸೃಷ್ಟಿಯಾಂಥಹ ಪಾತ್ರ ಬದಲಾವಣೆ ಮನುಷ್ಯನಿಗೆ ಸಹಜ ಗುಣವೆಂಬಂತೆ ನಂತರ ಬಂದಂತಹ ಕವಿಗಳು, ಕಥೆಗಾರರು ತಮ್ಮ ಕಥನ ಕೌಶಲ್ಯದಿಂದ ತಮ್ಮ ಕಥೆಗಳಲ್ಲಿ ಸಾಮಾನ್ಯ ಪಾತ್ರಗಳ ಮುಖಾಂತರವೇ ಹಾಸ್ಯರಸವನ್ನು ಸ್ಫುರಿಸಿದ್ದು, ಅವರ ಕಥನತಂತ್ರ ಮತ್ತು ಜಾಣ್ಮೆಗೆ ಸಾಕ್ಷಿಯಾಗಿವೆ. ತೇಜಸ್ವಿಯವರು ಒಬ್ಬ ಚಿಕ್ಕ ಹುಡುಗ ಏನಾದರೂ ಮಾತನಾಡಲಿ ತಾಳ್ಮೆಯಿಂದ ಕೇಳುವ ತಪ್ಪು ಒಪ್ಪುಗಳನ್ನು ನಿಧಾನವಾಗಿ ವಿಮರ್ಶೆ ಮಾಡುವ ಅಪೂರ್ವಗುಣ ಹೊಂದಿದ್ದರು. ಕುವೆಂಪು ತಮ್ಮ ಕವನಗಳಲ್ಲಿ ಶ್ರೀಸಾಮಾನ್ಯನನ್ನು ನಾಯಕನನ್ನಾಗಿ ಮಾಡಿದರು. ಆದರೆ ತಮ್ಮ ಮಹಾಕಾವ್ಯಗಳಲ್ಲಿ ಪುರಾಣಪುರುಷರನ್ನು ಮೆರೆಸಿದ್ದಾರೆ.

ಆದರೆ ತೇಜಸ್ವಿ ತಮ್ಮ ಇಡೀ ಸಮಸ್ತ ಬರಹಗಳಲ್ಲಿ ಸಾಮಾನ್ಯನನ್ನೇ ನಾಯಕನನ್ನಾಗಿ ಚಿತ್ರಿಸಿದರು. ಅವರ ಕಥೆಗಳು ಶ್ರೀಸಾಮಾನ್ಯರ ವಿಶಿಷ್ಟ ಪ್ರತಿಭಾಪೂರ್ಣ ಬದುಕನ್ನು ಅನಾವರಣ ಮಾಡಿ ಕನ್ನಡ ಓದುಗನಿಗೆ ಹೊಸ ಬೆಳಕವೊಂದನ್ನು ದರ್ಶನ ಮಾಡಿಸಿದರು. ಒಂದು ಕತೆಯ ಕಥಾಹಂದರ ಆ ಕಥೆಯ ಪಾತ್ರಗಳ ಮೂಲಕ ಸೃಷ್ಟಿಯಾಗುವಂತಹದ್ದು. ಆದ್ದರಿಂದ ಕಥೆಯಲ್ಲಿ ಬರುವ ಪಾತ್ರಗಳು ನಮಗೆ ತುಂಬಾ ಮುಖ್ಯ ಅನಿಸುತ್ತದೆ. ಈ ಪಾತ್ರಗಳ ಮುಖಾಂತರ ಕಥೆ ಮುಂದೆ ಸಾಗುತ್ತದೆ. ಕತೆಯ ಒಟ್ಟಾರೆಯ ಆಶಯವನ್ನು ಹೇಳುವಲ್ಲಿ ಅಲ್ಲಿನ ಪಾತ್ರಗಳು ತುಂಬಾ ಮುಖ್ಯವಾಗುತ್ತದೆ. ಹಾಗೆಯೇ ಒಂದೊಂದು ಸಲ ಅಲ್ಲಿನ ವಿಶಿಷ್ಟ ಪಾತ್ರಗಳು ಓದುಗರ ಮನದಲ್ಲಿ ಉಳಿಯುವುದು ಅದರ ಹಾಸ್ಯವೈಖರಿಯಿಂದ ಇಂತಹ ಪಾತ್ರಗಳನ್ನು ಸೃಷ್ಟಿಸುವಲ್ಲಿ ಕಥೆಗಾರನ ಕಥನಕೌಶಲ ಅಡಗಿದೆ. ತೇಜಸ್ವಿಯವರು ತಮ್ಮ ಕತೆಗಳನ್ನು ಹೆಚ್ಚು ಮಲೆನಾಡಿನ ಪರಿಸರದಲ್ಲಿ ಬರೆದಿರುವುದರಿಂದ ಅಲ್ಲಿನ ಜನಸಾಮಾನ್ಯರ ವರ್ತನೆಗಳು ಇರುವ ಕತೆಗಳಲ್ಲಿ ಹಾಸ್ಯವಾಗಿ ಪ್ರತಿಬಿಂಬಿತವಾಗಿದೆ.

ತೇಜಸ್ವಿಯವರ ಮಣ್ಣಿನ ಪಾತ್ರಗಳು ಅತ್ಯಂತ ಜೀವಂತವಾಗುವುದು. ತಮ್ಮ ವರ್ತನೆಗಳಿಂದ ಉಂಟುಮಾಡುವ ವಿಚಿತ್ರ ಸನ್ನಿವೇಶಗಳಿಂದ ಆಗ ಸೃಷ್ಟಿಯಾಗುವ ಹಾಸ್ಯಬದುಕಿನ ಗಂಭೀರ ಸಮಸ್ಯೆಗೆ ನಾಂದಿಯಾಗಿ ಹೊಸ ರೂಪ ಅರ್ಥಗಳನ್ನು ಪಡೆದುಕೊಳ್ಳುತ್ತವೆ. ಒಂದೊಂದು ಸಲ ನಿರೂಪಕರೇ ಹಾಸ್ಯವನ್ನು ತರುವುದು ಗಮನೀಯ. ತೇಜಸ್ವಿಯವರು ತಮ್ಮ ಕತೆಗಳಲ್ಲಿ ಚಿಕ್ಕವರಿಂದ ಹಿಡಿದು ದೊಡ್ಡಪಾತ್ರಗಳವರೆಗೂ, ಸಾಮಾನ್ಯ ಪಾತ್ರಗಳಿಂದ ಮುಖ್ಯಪಾತ್ರಗಳಲ್ಲಿಯೂ ಹಾಸ್ಯವನ್ನು ತಂದಿರುವುದು ಅವರ ಹಾಸ್ಯ ನಿರೂಪಣೆಗೆ ಸಾಕ್ಷಿ. ಇವರು ಹಾಸ್ಯಕ್ಕೆ ಬಳಸಿಕೊಂಡಿರುವ ಪಾತ್ರಗಳು ಮಾರ, ಪ್ಯಾರ, ಕಿವಿ, ಭೈರ, ಮಾಸ್ತಿ, ಕುಳುಪ ಅಲ್ಲಿನ ಪರಿಸರಕ್ಕೆ ತಕ್ಕಂತೆ ತೇಜಸ್ವಿ ಈ ಪಾತ್ರಗಳ ಮೂಲಕ ಹಾಸ್ಯವನ್ನು ತಮ್ಮದೇ ಆದ ದೃಷ್ಟಿಕೋನದಲ್ಲಿ ತಂದಿದ್ದಾರೆ. ಅವರ ಮಾಯಾಮೃಗ ಎಂಬ ಕತೆಯಲ್ಲಿ ಅವರ ಸ್ನೇಹಿತ ಹಾಗೂ ದೆವ್ವ ಮಾತ್ರ ಎಲ್ಲ ಮೂಢನಂಬಿಕೆ ಎಂಬುದಾಗಿ ಹೇಳಿ ಅದನ್ನು ನಿರೂಪಿಸಲು ಸ್ಮಶಾನಕ್ಕೆ ಹೋಗುತ್ತಾರೆ. ದೆವ್ವಗಳು ಮಾಯಾರೂಪಿಗಳು ಅವು ಇಷ್ಟಬಂದ ರೂಪಧರಿಸುತ್ತದೆ ಎಂದು ತಿಳಿದ ಅವರುಗಳ ತರ್ಕಸರಣಿ ಒಳಗೊಳಗೆ ಅವರಿಗೆ ದೆವ್ವ, ಭೂತ ಪರಿಕಲ್ಪನೆ ಪರಿಸರದ ಪ್ರಭಾವದಿಂದ ಅವರಿಗೆ ಅವರಲ್ಲೇ ಮನೆಮಾಡಿರುವುದು ಅವರ ಸಂಭಾಷಣೆಯಿಂದ ತಿಳಿದುಬರುತ್ತದೆ. ಆಗ ಅವರು ಒಬ್ಬೊರನ್ನು ಒಬ್ಬರು ಗುರ್ತಿಸಿಕೊಳ್ಳಲು ಒಂದು ಮಂತ್ರ ಹೇಳಿಕೊಡುತ್ತಾರೆ. ಅದನ್ನು ಷಾ ಎನ್ನುವ ಪಾತ್ರ ನಿರೂಪಕರಿಗೆ ಹೇಳಿಕೊಡುತ್ತಾರೆ. ಆದರೆ ನಿರೂಪಕರು ಅದನ್ನು ಜ್ಞಾಪಕ ಮಾಡುವಲ್ಲಿ ವಿಫಲರಾಗುತ್ತಾರೆ. ಆಗ ಅವರ ವರ್ತನೆ ಓದುಗರಲ್ಲಿ ಹಾಸ್ಯದ ಹೊನಲನ್ನು ಹರಿಸುತ್ತದೆ.

ಷಾ ಕೈಯಲ್ಲಿ ದೊಣ್ಣೆ ಝಳಪಿಸುತ್ತಾ ನನ್ನ ಕಡೆಗೆ ತಿರುಗಿ ದೆವ್ವವನ್ನು ಉದ್ದೇಶಿಸಿ ಮಾತಾಡುವವರಂತೆ "ಲೇ ನಿನ್ನ ಮಾಯಾ ನನ್ನತ್ರ ನಡೆಯೋದಿಲ್ಲ. ನಿನ್ನ ವೇಷಗೀಷ ಎಲ್ಲ ಕಟ್ಟಿಡು ಬೊಗಳೆ ನಿನ್ನ್ಯಾರು ಅಂತ" ಎಂದು ಕರ್ಕಶಸ್ವರದಲ್ಲಿ ಹೇಳಿದರು. ಈಗ ಈ ಕತೆ ಓದುವಾಗ ನಮಗೆಲ್ಲ

ನಗುಬರಬಹುದಾದರೂ ಆ ಸ್ಮಶಾನದ ಅಪರಾತ್ರಿಯಲ್ಲಿ ದೊಣ್ಣೆಯಿಡಿದು ಷಾ ಹಾಗೆ ಹೇಳುತ್ತಲೂ ನನಗೆ ನಿಜಕ್ಕೂ ಕೊಂಚ ದಿಗಿಲು ಆರಂಭವಾಯಿತು. ಹಳ್ಳಿ ಕಡೆ ಸುಮಾರು ಜನ ಮಂತ್ರವಾದಿಗಳು ದೆವ್ವ ಹಿಡಿದವರಿಗೆ ದೆವ್ವ ಬಿಡಿಸುವುದನ್ನು ನೋಡಿದ್ದ ನನಗೆ ದಿಗಿಲಾದಲ್ಲಿ ಅಸ್ವಾಭಾವಿಕವೇನಿಲ್ಲ ಎನ್ನಿ.

'ಹೂಂ ಬೊಗಳು ನೀನ್ಯಾರಂತ ಎಂದು ಷಾ ಮತ್ತೊಮ್ಮೆ ಘರ್ಜಿಸಿ ಒಂದು ಹೆಜ್ಜೆ ಮುಂದಿಟ್ಟರು.

ಓಹೋ! ಪರಿಸ್ಥಿತಿ ಯಾಕೋ ಕೈ ಮೀರುತಿದೆ. ಇಬ್ಬರ ಮೇಲೂ ದೆವ್ವಗಳೂ ಪ್ರಭಾವ ಬೀರತೊಡಗಿದೆ. ಇಬ್ಬರೂ ಆಕಸ್ಮಾತ್ ಇಲ್ಲೇನಾದರೂ ಹೊಡೆದಾಡಿ ಬುರುಡೆ ಹೊಡೆದುಕೊಂಡು ಸತ್ತರೆ ಬೆಳಗ್ಗೆ ನಮ್ಮಿಬ್ಬರ ಹೆಣವನ್ನು ನೋಡಿದ ಜನರಂತೂ ಹೀಗೆ ಭಾವಿಸುವುದು ಖಂಡಿತ. ಬೇಗ ಏನಾದರೂ ಮಾಡಬೇಕು" ಎಂದು ಯೋಚಿಸಿದೆ.



ಷಾ ಇನ್ನೊಂದು ಹೆಜ್ಜೆ ಮುಂದಿಟ್ಟರು

"ಒಂದು ನಿಮಿಷ ತಡೆಯಿರಿ, ನೀವು ಹೇಳಿದ ಸುಡುಗಾಡು ಚೈನೀ ಮಂತ್ರ ಯಾಕೋ ತಲೆಗೆ ಹೊಳೆಯುತ್ತಿಲ್ಲ ಎಂದು ಗಾಬರಿಯ ಸ್ವರದಲ್ಲಿ ಕೂಗಿದೆ. ನನ್ನ ಮಾತು ಕೇಳಿ ಷಾ 'ಅಯ್ಯಾ ನೀವೇನೇನ್ರೀ! ಥುತ್ ಎಂದರು ತಾತ್ಸರದಿಂದ"[3]

ಹೀಗೆ ಎಂತಹ ಗಂಭೀರ ಸನ್ನಿವೇಶದಲ್ಲೂ ಸಹ ಅವರ ತರುವ ಪಾತ್ರಗಳ ಅವರ ವರ್ತನೆಗಳು ಓದುಗರಲ್ಲಿ ಹಾಸ್ಯವನ್ನು ತರುತ್ತದೆ. ಹಾಗೆಯೆ ಅವರ 'ರಹಸ್ಯ ವಿಶ್ವ' ಎಂಬ ಕತೆಯಲ್ಲಿ ಬರುವ ತಾವು ಚಿಕ್ಕ ಹುಡುಗನ ಪಾತ್ರದ ಮೂಲಕ ಹಾಸ್ಯ ತಂದಿರುವುದನ್ನು ಗಮನಿಸಬಹುದು. ತನ್ನ ರಜೆ ದಿನಗಳಲ್ಲಿ ಸೈಕಲ್ ಕಲಿಯಲು ಇಳಿಜಾರಿನ ರಸ್ತೆಗೆ ಹೋಗುತ್ತಾರೆ. ಪ್ರಫುಲ್ಲ ಮತ್ತು ಪುರುಷೊತ್ತಮ ಸೈಕಲನ್ನು ತಳ್ಳಿಬಿಡುತ್ತಾರೆ. ಆ ಹುಡುಗ ಬ್ಯಾಲೆನ್ಸ್ ತಪ್ಪಿ ದಾರಿಯಲ್ಲಿ ಬರುತ್ತಿದ್ದ ರಂಗಮ್ಮ ಎನ್ನುವ ದಢೂತಿ ಹೆಂಗಸಿಗೆ ಢಿಕ್ಕಿ ಹೊಡೆಯುತ್ತಾನೆ. ಆಗ ಅವನು ಹೇಳುವ ಮಾತು ಆ ಪುಟ್ಟ ಹುಡುಗನ ಪಾತ್ರಕ್ಕೆ ಎಷ್ಟು ನಿರರ್ಗಳವಾಗಿ ಲೇಖಕರು ಹಾಸ್ಯ ತುಂಬಿದ್ದಾರೆ. ಅದನ್ನು ಕಾಣಬಹುದಾಗಿದೆ.

"ಸೈಕಲ್ ನೇರವಾಗಿ ಹೋಗಿ ಮುಂದಿನ ಚಕ್ರ ಅವಳ ಎರಡು ಕಾಲಿನ ನಡುವೆ ನುಗ್ಗಿ ಹ್ಯಾಂಡಲ್ ಅವಳ ಹೊಟ್ಟೆಗೆ ಢಿಕ್ಕಿ ಹೊಡೆಯಿತು. ಹುಣಿಸೆ ಮರದ ಬೊಡ್ಡೆಯಂತೆ ಅಲ್ಲಾಡದೆ ನಿಂತಿದ್ದ ಅವಳಿಗೆ ಸೈಕಲ್ ಢಿಕ್ಕಿ ಹೊಡೆದ ಕೂಡಲೇ ಪೆಡಲ್ ಸಹ ಕಾಲಿಗೆ ನಿಲುಕದೆ ಸೀಟಿನ ಮೇಲೆ ಹಗುರವಾಗಿ ಕುಳಿತಿದ್ದ ನಾನು ಇಲಿಮರಿತರ ಹಾರಿ ದೊಡ್ಡ ದಿಂಬಿನಂತಿದ್ದ ಅವಳ ಎದೆಗೆ ಡಿಕ್ಕಿ ಹೊಡೆದು ಕೆಳಗೆ ಬಿದ್ದೆ. ಅಪಘಾತಗಳೆಂದರೆ ಸಾವೇ ಎಂದು ತಿಳಿದಿದ್ದ ನಾನು ನನ್ನ ಇತಿಶ್ರೀ ಅಲ್ಲಿಗೆ ಮುಗಿಯಿತೆಂದೇ ತಿಳಿದೆ. ಪ್ರಪಂಚ ಎಲ್ಲಾ ತಲೆಕೆಳಗಾದಂತೆ ಎಲ್ಲಕ್ಕೂ ಮೋಡ ಮುಸುಕಿದಂತೆ ಕಂಡಿತು".

ಇಲ್ಲಿ ಚಿಕ್ಕ ಹುಡುಗ ಒಬ್ಬ ದಡೂತಿ ಹೆಂಗಸನ್ನು ವರ್ಣಿಸುವಲ್ಲಿ ತನ್ನ ಪಾತ್ರಕ್ಕೆ ಜೀವತುಂಬಿದ್ದಾನೆ. ಈ ಸನ್ನಿವೇಶವು ದೊಡ್ಡವರಿಂದ ಚಿಕ್ಕವರಿಗೂ ಹಾಸ್ಯರಸ ತರುವಂತಹದ್ದು. ಇವರ

ಕಥೆಗಳಲ್ಲಿ ಹೆಚ್ಚಾಗಿ ಹಾಗೂ ಮುಖ್ಯವಾಗಿ ಬರುವಂತಹ ಪಾತ್ರ ಎಂದರೆ ಮಾರ, ಪ್ಯಾರ, ಕಿವಿ, ಎಂಬ ಸಾಮಾನ್ಯ ಪಾತ್ರಗಳು. ತಮಗೆ ಅನಾದಿ ಕಾಲದಿಂದಲೂ ಮೂಢನಂಬಿಕೆಗಳು ತಮ್ಮ ಪಿತ್ರಾರ್ಜಿತ ಆಸ್ತಿ ಎಂಬಂತೆ ಬಂದಿವೆ ಎನ್ನುವ ವರ್ತನೆಗಳೇ ತೇಜಸ್ವಿಯವರ ಹಾಸ್ಯ ಸನ್ನಿವೇಶಗಳಾಗಿವೆ. ತೇಜಸ್ವಿಯವರ 'ಪ್ಯಾರನಿಗೆ ಸೈತಾನನ ಕಾಟ' ಎಂಬ ಕತೆಯಲ್ಲಿ ಪ್ಯಾರ ತನ್ನ ಅವಿವೇಕದಿಂದ ಹಾಸ್ಯಕ್ಕೆ ಗುರಿಯಾಗುವಂತಹದು. ಇಲ್ಲಿ ನಿರೂಪಕರು ಸಹಜವಾಗಿ ಹಾಸ್ಯ ತರುವಂತಹುದನ್ನು ಕಾಣಬಹುದಾಗಿದೆ. ಪ್ಯಾರನಿಗೆ ಓತಿಕ್ಯಾತ ಎಂದರೆ ಪರಮ ವೈರಿ. ಏಕೆಂದರೆ ಪ್ಯಾರ ಮೂಲತಃ ಮುಸ್ಲಿಂ. ಆ ಧರ್ಮದ ಸಂಸ್ಥಾಪಕ ಮಹಮ್ಮದ್‌ನನ್ನು ಒಮ್ಮೆ ಶತ್ರುಗಳು ಹುಡುಕುತ್ತಾ ಬಂದಾಗ ಅವರು ಒಂದು ಗುಹೆಯಲ್ಲಿ ಬಚ್ಚಿಟ್ಟುಕೊಳ್ಳುತ್ತಾರೆ. ಆ ಗುಹೆಯ ಪಕ್ಕದ ಬಂಡೆಯ ಮೇಲೆ ಒಂದು ಓತಿಕ್ಯಾತ ಕುಳಿತಿರುತ್ತದೆ. ಅಲ್ಲಿಗೆ ಬಂದ ಶತ್ರು ಸೈನಿಕರು ಅದನ್ನು ಉದ್ದೇಶಿಸಿ ಇಲ್ಲಿ ಮಹಮ್ಮದ್‌ರು ಇದ್ದಾರೆಯೇ ಎಂದಾಗ ಅದು ಊಂ ಎಂಬಂತೆ ತಲೆ ಆಡಿಸುತ್ತದೆ. ಈ ಕಾರಣಕ್ಕಾಗಿ ಓತಿಕ್ಯಾತ ಎಲ್ಲಿ ಕಂಡರೂ ಸಹ ಪ್ಯಾರ ಅದನ್ನು ಬೆನ್ನಟ್ಟುತ್ತಿರುತ್ತಾನೆ. ಒಂದು ಸಲ ನಿರೂಪಕರು ಪ್ಯಾರ ಕಿವಿಯೊಡಗೂಡಿ ಜೇನುಪೆಟ್ಟಿಗೆಯನ್ನು ತರಲು ಒಂದು ವಿಸ್ತಾರ ಬಯಲಿನ ಹುತ್ತದ ಹತ್ತಿರ ಹೋಗುತ್ತಾರೆ. ಅದೇ ಸಮಯಕ್ಕೆ ಅಲ್ಲಿ ಪ್ಯಾರನಿಗೆ ಓತಿಕ್ಯಾತ ಕಾಣಿಸಿಬಿಡುತ್ತದೆ. ಅದನ್ನು ಬೆನ್ನಟ್ಟಿದ ಪ್ಯಾರ ಮತ್ತು ಕಿವಿ ಕೊನೆಗೂ ಅದು ಅವರಿಗೆ ಸಿಗದೆ ಪ್ಯಾರನ ಚಡ್ಡಿಯೊಳಗೆ ಸೇರಿಬಿಡುತ್ತದೆ.

"ಓತಿಕ್ಯಾತ ಪ್ಯಾರನ ಚಡ್ಡಿ ಒಳಗೆ ನುಗ್ಗಿದ್ದರ ಪರಿಣಾಮ ಮಾತ್ರ ಭೀಕರವಾಗಿತ್ತು. ಬಹುಶಃ ಓತಿಕ್ಯಾತ ಅವನ ಚಡ್ಡಿಯೊಳಗೆ ನುಗ್ಗಿ ಅಡಗಿಕೊಳ್ಳಲು ಪ್ರಾಶಸ್ತ ಜಾಗಕ್ಕೆ ಹುಡುಕಾಡಿತ್ತೊ ಏನೋ! ಪ್ಯಾರ ತನ್ನ ಮರ್ಮಸ್ಥಾನಗಳಿಗೆ ಅದಿನ್ನೇನು ಕಚ್ಚಿಕೊಳ್ಳುತ್ತದೆ ಎಂದು ಊಹಿಸಿ ಕೈಯ್ಯಲ್ಲಿದ್ದ ಅಣಬೆಗಳನ್ನು ಬಿಸಾಕಿ ಅಯ್ಯೋಯ್ಯೋ ಎಂದು ಆರ್ತನಾದ ಮಾಡುತ್ತಾ ದೆವ್ವ ಹಿಡಿದವನಂತೆ ಯರ್‍ರಾಬಿರ್‍ರಿ ಕುಣಿದ. ಮಾನ ಮರ್ಯಾದೆಗಳಿಗೆ ಗಮನ ಕೊಡದಷ್ಟು ಹೆದರಿಕೆ ಉಲ್ಬಣಿಸಿ ಕುಣಿ ಕುಣಿಯುತ್ತಲೇ ಚಡ್ಡಿ ಬಿಚ್ಚಿದ. ಚಡ್ಡಿ ಯಾವಾಗ ಸಡಿಲ ಮಾಡಿದನೋ ಓತಿಕ್ಯಾತಕ್ಕೆ ಇನ್ನೂ ಮೇಲೆ ಹತ್ತಲು ಅವಕಾಶ ಆಯ್ತು. ಅದು ಅವನ ಸೊಂಟದ ಮೇಲೆ ಹತ್ತಿ ಒಳಗೆ ನುಗ್ಗಿ ಅಲ್ಲೆಲ್ಲ ಗುಳುಗುಳು ಕಚಗುಳಿ ಇಟ್ಟಿತು. ಪೀಡೆ ಮೈಮೇಲೆ ಮುಂದುವರಿದ್ದದ್ದನ್ನು ನೋಡಿ ಪ್ಯಾರ ಇನ್ನೂ ಗಾಬರಿಬಿದ್ದ. ಚಡ್ಡಿ ಮೇಲೆ ಕಟ್ಟಿಕೊಳ್ಳಲು ವ್ಯವಧಾನ ಇಲ್ಲದೆ ಅದನ್ನು ಕೈಬಿಟ್ಟ. ಅದು ಕೆಳಗೆ ಬಿತ್ತು. 'ಅಯ್ಯೋಯ್ಯೋ ಎಂದು ಇನ್ನೂ ಗಟ್ಟಿ ಕೂಗುತ್ತ ಅಂಗಿ ಬಿಚ್ಚತೊಡಗಿದ, ಮಂಜಪ್ಪ ಬರುವ ಹೊತ್ತಿಗೆ ಪ್ಯಾರ ಬರಿ ಬೆತ್ತಲಾಗಿ ನಿಂತಿದ್ದ. ಮಂಜಪ್ಪ ಬಂದು ಗಾಬರಿಯಲ್ಲಿ ಏನು? ಏನಾಯ್ತು? ಎಂದು ಕೇಳಿದಾಗ ನಾನು ನಡೆದ ವಿಷಯ ಹೇಳಿದೆ ಮಂಜಪ್ಪ ನಗಲಾರಂಭಿಸಿದ. ಓತಿಕ್ಯಾತ ಅಲ್ಲಲ್ಲಿ ಓಡಾಡಿ ಕೊನೆಗೆ ಕಿವಿ ಬಾಯಿಂದ ತಪ್ಪಿಸಿಕೊಳ್ಳಲು ಅನ್ಯಮಾರ್ಗ ಕಾಣದೆ ಬಯಲಿನಲ್ಲಿ ನಿಂತಿದ್ದ ನಮ್ಮ ಕಾಲುಗಳ ಕಡೆಗೆ ಓಡಿಬಂತು. ಅಯ್ಯೋಯ್ಯೋ ಮತ್ತೆ ಬಂತು ಸೈತಾನ್ ಎಂದು ಕೂಗುತ್ತಾ ಕೆಳಗೆ ಬಿದ್ದಿದ್ದ ಅಂಗಿ ಚಡ್ಡಿಗಳನ್ನು ಎತ್ತಿಕೊಂಡು ಪ್ಯಾರ ಬರಿ ಬೆತ್ತಲೆ

ಓಡತೊಡಗಿದ. ನಾನೂ ನನ್ನ ಪ್ಯಾಂಟುಗಳಿಗೆ ನುಗ್ಗಿದರೆ ಏನು ಗತಿ ಎಂದು ಗಾಬರಿಯಾಗಿ ಪ್ಯಾರನ ಹಿಂದೆ ನಾನೂ, ನನ್ನ ಹಿಂದೆ ಶಿಕಾರಿ ಮಂಜಪ್ಪನು, ಓಡತೊಡಗಿದೆವು"[೬] ಇಲ್ಲಿ ಪ್ಯಾರ ತನಗೆ ಅರಿವಿಲ್ಲದಂತೆ ಅವಾಂತರಕ್ಕೆ ಸಿಕ್ಕಿ ಹಾಸ್ಯಪಾತ್ರವಾಗುತ್ತಾನೆ. ಕಲೆಗಾರನ ಕೈಯಲ್ಲಿ ಕಲ್ಲು ಬಂಡೆಯು ಸಹ ಶಿಲ್ಪವಾಗುವಂತೆ, ಸಾಮಾನ್ಯನಂತೆ ಕಥೆಯಲ್ಲಿ ಬರುವ ಪ್ಯಾರ ಹಾಸ್ಯ ಪಾತ್ರದಾಗಿ ವಿಜೃಂಭಿಸುವಲ್ಲಿ ಕತೆಗಾರರ ಕಲೆಗಾರಿಕೆ ಅಮೋಘನೀಯ. ಇವರ ಕತೆಗಳಲ್ಲಿ ಪ್ರಾಣಿಗಳು ಸಹ ಕೆಲವೊಮ್ಮೆ ಓದುಗರಲ್ಲಿ ಹಾಸ್ಯವನ್ನು ಸ್ಪುರಿಸುತ್ತವೆ. ಉದಾಹರಣೆಗೆ ಇವರ ಸಾಕು ಪ್ರಾಣಿ ಕಿವಿ(ನಾಯಿ) ಇದು ತೇಜಸ್ವಿಯವರ ಅಚ್ಚುಮೆಚ್ಚಿನ ನಾಯಿ. ಅವರು ಎಂದೂ ಸಹ ಆ ನಾಯಿಯನ್ನು ಪ್ರಾಣಿಯಂತೆ ಕಾಣದೇ ತಮ್ಮ ಭಾಷಾಶೈಲಿಯ ಮೂಲಕ ಅದನ್ನು ಒಂದು ಮನುಷ್ಯ ಪಾತ್ರದಂತೆ ಸೃಷ್ಟಿಸಿದ ಕಲೆಗಾರಿಕೆ ತೇಜಸ್ವಿಯವರದು. ಅವರ 'ಮಾಸ್ತಿ ಮತ್ತು ಭೈರ' ಎಂಬ ಕತೆಯಲ್ಲಿ ಕಿವಿ ಮಾಸ್ತಿಯನ್ನು ಕಂಡು ಬೊಗಳುತ್ತಾ ಗಲಾಟೆ ಮಾಡುತ್ತದೆ. ಇದಕ್ಕೆ ನಿರೂಪಕರು ಕೊಡುವ ಕಾರಣಗಳು, ಕಿವಿ ಪಾತ್ರಕ್ಕೆ ವ್ಯಕ್ತಿತ್ವದ ದರ್ಶನಕ್ಕೆ ಹಾಗೂ ವಿನೋದಕ್ಕೆ ಕಾರಣವಾಗುತ್ತದೆ.

"ಕಿವಿ ಮನುಷ್ಯರನ್ನು ಕಂಡರೆ ಅಷ್ಟೊಂದೇನೂ ಗಲಾಟೆ ಮಾಡುತ್ತಿರಲಿಲ್ಲ. ಅದು ನಾಗರೀಕ ಉಡುಪಿನಲ್ಲಿ ಯಾರಾದರೂ ಬಮದರೆ ಸುಮ್ಮನೆ ಗುರುಗುಟ್ಟುತ್ತಿತ್ತೇ ವಿನಃ ತುಂಬಾ ಗಲಾಟೆ ಮಾಡುತ್ತಿರಲಿಲ್ಲ. ಅದಕ್ಕೆ ಕಳ್ಳರಿಗೂ, ಸುಳ್ಳರಿಗೂ, ಒಳ್ಳೆಯವರಿಗೂ, ವ್ಯತ್ಯಾಸ ಗೊತ್ತಿತ್ತೊ ಇಲ್ಲವೋ! ಸಂಶಯ. ಆದರೆ ಬಡವರಿಗೂ ಶ್ರೀಮಂತರಿಗೂ ಇರುವ ವ್ಯತ್ಯಾಸ ಅದಕ್ಕೆ ಚೆನ್ನಾಗಿ ಗೊತ್ತಿತ್ತು. ಸೂಟು ಪ್ಯಾಂಟು ಹಾಕಿಕೊಂಡು ಕಾರಿನಲ್ಲಿ ಬಂದು ಇಳಿಯುವವರನ್ನು ಕಂಡರೆ ಸುಮ್ಮನೆ ಗುರುಗುಟ್ಟು, ಅಸಹನೆ ಪ್ರದರ್ಶಿಸಿತ್ತು. ಆದರೆ ಕೊಂಚ ಮಾಸಲಾದ, ಅಥವಾ ಹರಿದ ಬಟ್ಟೆಗಳನ್ನು ಹಾಕಿಕೊಂಡು, ಸರಿಯಾಗಿ ತಲೆ ಬಾಚದೆ, ಕೂದಲು ಕೆದರಿಕೊಂಡು ಚಪ್ಪಲಿ ಮೆಟ್ಟಿಕೊಂಡು, ಒಟ್ಟಿನಲ್ಲಿ ಬಡವರಂತೆ ತೋರಿಸಿಕೊಳ್ಳುವವರನ್ನು ಕಂಡರೆ ರೋಷಾವೇಶದಿಂದ ಆತ ನಮ್ಮ ಮನೆ ಬಳಿ ಬಂದುದೆ ಮಹಾಪರಾಧ ಎಂಬಂತೆ ಬೆನ್ನ ಮೇಲಿನ ಕೂದಲು ನಿಮಿರಿಸಿಕೊಂಡು ತನ್ನ ಕ್ರೂರ ದಂತಪಂಕ್ತಿಗಳನ್ನು ಪ್ರದರ್ಶಿಸುತ್ತಾ, ಬಂದವನು ಹೆದರಿ ಓಡಿಹೋಗುವಂತೆ ಅಬ್ಬರಿಸಿ ಕೂಗುತ್ತಿತ್ತು. ನನ್ನಂಥಾ ಸಮಾಜವಾದಿಯ ನಾಯೇ ಈ ತರಾ ಬೂರ್ಷ್ವಾ ಗುಣಗಳನ್ನು ಮೈಗೂಡಿಸಿ ಕೊಂಡಿರಬೇಕಾದರೆ ಇನ್ನು ಕಮ್ಯುನಿಸ್ಟ್ ರಾಜ್ಯಗಳಲ್ಲಿ ಬೂರ್ಷ್ವಾ ಪ್ರತಿಕ್ರಾಂತಿ ಸಂಭವಿಸಿದ್ದೇನು ದೊಡ್ಡದಲ್ಲ. 'ಗರೀಬಿ ಹಟಾವೋ' ಎನ್ನುವ ಇಂದಿರಾ ಗಾಂಧಿಯವರ ವೇದವಾಕ್ಯವನ್ನು ಕಿವಿ ಈ ತರಹ ತಪ್ಪಾಗಿ ಅರ್ಥೈಸಿಕೊಂಡಿದ್ದು ನಿಜಕ್ಕೂ ವಿಷಾದನೀಯ."[೭] ಇಲ್ಲಿ ನಿರೂಪಕರು ನಿರೂಪಿಸುವಂತಹ ಪಾತ್ರಗಳು ತಮ್ಮ ವರ್ತನೆಗಳೊಡಗೂಡಿ ಲೇಖಕರ ನಿರೂಪಣೆಯ ಅಲೋಚನಕ್ರಮದಿಂದ ಹಾಸ್ಯ ಪಾತ್ರಗಳಾಗುವುದನ್ನು ಕಾಣಬಹುದಾಗಿದೆ. ಕಿವಿಯು ಮಾಸ್ತಿಯ ವೇಷಭೂಷಣಗಳನ್ನು ಕಂಡು ಬೊಗಳುವುದು ಅದರ ವ್ಯಕ್ತಿತ್ವಕ್ಕೆ ಸ್ವಾಭಾವಿಕವಾದರೂ ಅದನ್ನು ನಿರೂಪಿಸುವ ತೇಜಸ್ವಿಯವರ ಗರೀಬಿ ಹಟಾವೋ ಉದಾಹರಣೆ ನಿಜಕ್ಕೂ ಅದ್ಭುತ.

ಹಾಗೆಯೇ ಇವರ ಮತ್ತೊಂದು ಕಥೆಯಾದ 'ಡೇರ್ ಡೆವಿಲ್ ಮುಸ್ತಫಾ'ದಲ್ಲಿ ಜಾತಿ ಸಂಘರ್ಷದಲ್ಲಿ ಪ್ರಮುಖ ಪಾತ್ರವಾದ ಮುಸ್ತಫಾನ ಪಾತ್ರದ ಮೂಲಕ ಹಾಸ್ಯವನ್ನು ತಂದಿದ್ದಾರೆ. ಕಾಲೇಜಿಗೆ ಸೇರಿದ ಏಕೈಕ ಮುಸಲ್ಮಾನ್ ವ್ಯಕ್ತಿ ಮುಸ್ತಫಾ ಅಷ್ಟು ಜನ ಹಿಂದೂಗಳಿರುವ ಕಾಲೇಜಿನಲ್ಲಿ ತನ್ನದೇ ಆದ ವ್ಯಕ್ತಿತ್ವದಿಂದ ಕಾಲೇಜಿನಲ್ಲಿ ಆಗುವ ಸಂಘರ್ಷಗಳಿಗೆ ಕಾರಣನಾಗುತ್ತಾನೆ. ಮುಸ್ತಫಾನ ಭಂಡ ಧೈರ್ಯದಿಂದ ಬೇಸತ್ತ ಅವನ ಕ್ಲಾಸಿನ ಇತರೆ ಯುವಕರು ಅವನನ್ನು ಹೇಗಾದರೂ ಅವಮಾನ ಪಡಿಸಲಿಕ್ಕೆ ಕಾಯುತ್ತಿರುತ್ತಾರೆ. ಆ ಸಂದರ್ಭ ಕಾಲೇಜ್‌ನ ಯೂನಿಯನ್ ಡೇ ದಿನ ಬರುತ್ತದೆ. ಕನ್ನಡ ಚರ್ಚಾಸ್ಪರ್ಧೆಗೆ ಮುಸ್ತಫಾನಿಗೆ ಕನ್ನಡ ಸರಿಯಾಗಿ ಬರುವುದಿಲ್ಲ ಎಂದು ಗೊತ್ತಿದ್ದರೂ ಅವನ ಹೆಸರನ್ನು ಸೇರಿಸಿ ಅವನನ್ನು ಅಪಹಾಸ್ಯಕ್ಕೆ ಗುರಿ ಮಾಡುತ್ತಾರೆ. ಮಾರನೇ ದಿನ ಟ್ಯಾಲೆಂಟ್ಸ್ ಡೇ ಆಗ ಮುಸ್ತಫಾ ಆ ಸೇಡನ್ನು ತೀರಿಸಿಕೊಳ್ಳಲು ಮುಸ್ತಫಾ ತನ್ನ ಜಾದೂ ಮಾಡುವುದಾಗಿ ಹೇಳಿ ಅದರಲ್ಲೂ ಮೊಟ್ಟೆ ಬೇರೆಯವರ ಜೇಬಲ್ಲಿಟ್ಟು ಅದನ್ನು ಮಾಯ ಮಾಡುವಲ್ಲಿ ತನ್ನ ಚಾಕಚಾಕ್ಯತೆ ತೋರಿಸುವುದಾಗಿ ಹೇಳಿ ತನ್ನ ಹೆಸರನ್ನು ಚರ್ಚಾಸ್ಪರ್ಧೆಯಲ್ಲಿ ಸೇರಿಸಿದ ರಾಮಾನುಜ ಅಯ್ಯಂಗಾರಿಯನ್ನು ಕರೆಯುತ್ತಾನೆ.

"ನೋಡಿ ಇದು ಎಲ್ಲಿತ್ತೊ ಅಲ್ಲಿ, ಹೇಗಿತ್ತೊ ಹಾಗೆ ತಲಿಸ್ಮಾನ್ ಶಕ್ತಿಯಿಂದ ಮಾಯ ಮಾಡ್ತಿನಿ" ಎಂದು ಮುಸ್ತಫಾ ಹೇಳಿ ಕರವಸ್ತ್ರವನ್ನು ತೆಗೆದು ರಾಮಾನುಜ ಅಯ್ಯಂಗಾರಿಯ ಹೊಸ ಉಲ್ಲನ್ ಕೋಟಿನ ಮೇಲು ಜೇಬಿನೊಳಗೆ ಇಟ್ಟ. ಎಂಥೆದ್ದೊ ಮಣ ಮಣ ಪಠಿಸುತ್ತಾ ಕೈ ಚಿಟಿಕೆ ಹೊಡೆದು ಜೇಬಿನ ಸುತ್ತ ಕೈ ಸುತ್ತುತ್ತಿದ್ದ ಎಲ್ಲರೂ ಮುಳ್ಳಿನ ಮೇಲೆ ನಿಂತಂತ ನೋಡುತ್ತಿದ್ದರು.

ಈಗ ನೋಡಿ ಖಾಲಿಯಾಗಿದೆ. ಅಯ್ಯಂಗಾರಿ ಜೇಬಿನಲ್ಲಿ ಏನೂ ಇಲ್ಲ ಖಾಲಿ ಖಾಲಿ ಎಂದು, ಅದು ಖಾಲಿಯಾಗಿರುವುದನ್ನು ಸಭಿಕರಿಗೆ ಸಿದ್ದಪಡಿಸಲು ಜೇಬನ್ನು ಅಂಗೈಯಿಂದ ಬಲವಾಗಿ ತಟ್ಟಿದ. ಜೇಬಿನೊಳಗಿದ್ದ ಕೋಳಿ ಮೊಟ್ಟೆ ಚಿಪ್ಪು ಲರಕ್ ಎಂದು ಪುಡಿಯಾಗಿದ್ದು ಅಯ್ಯಂಗಾರಿಗೆ ಚೆನ್ನಾಗಿ ಕೇಳಿಸಿತು. ಆದರೂ ಮುಸ್ತಫಾನ ತಲಿಸ್ಮಾನ್ ಕೆಲಸ ಮಾಡಿತೇನೋ ಎಂದು ಸುಮ್ಮನೆ ಕುಳಿತಿದ್ದ.

ನಿಧಾನವಾಗಿ ಕೋಳಿ ಮೊಟ್ಟೆ ಗಬ್ಬುನಾತದ ಲೋಳೆಯೂ ರಾಮಾನುಜ ಅಯ್ಯಂಗಾರಿಯ ಉಲ್ಲನ್ ಕೋಟಿನ ಮೇಲು ಜೇಬಿನಿಂದ ಇಳಿಯತೊಡಗಿತು. ಅಯ್ಯಂಗಾರಿಗೆ ಇದೇನೆಂದು ಅರ್ಥವಾಗಲಿಲ್ಲ. ಮುಸ್ತಫಾ ಸಭಿಕರ ಕಡೆಗೆ ತಿರುಗಿ ಗಂಭೀರವಾಗಿ ಹೇಳಿದ. "ಕ್ಷಮಿಸಬೇಕು, ನನ್ನ ತಲಿಸ್ಮಾನ್ ಶಕ್ತಿಯು ನನ್ನ ಫಜ್ ಟೋಪಿಯ ಜೊತೆಗೆ ಹಾಳಾಗಿ ಹೋಗಿದೆ, ಎಂದು ಕಾಣುತ್ತದೆ. ಮೊಟ್ಟೆ ಮಾಯವಾಗಲಿಲ್ಲ. ರಾಮಾನುಜ ಅಯ್ಯಂಗಾರಿಯ ಕೋಟಿನ ಜೇಬಿನಲ್ಲಿ ಒಡೆದು ಹೋಗಿದೆ ಎಂದು ಹೇಳಿದ.

ಇಡೀ ಸಭೆಗೆ ಮುಸ್ತಫಾನ ಕುಚೋದ್ಯ ಇದ್ದಕ್ಕಿದಂತೆ ಅರ್ಥವಾಗಿ ಹೋ ಎಂದು ಬಿದ್ದು ಬಿದ್ದು ನಗತೊಡಗಿದರು. ಇಲ್ಲಿ ಜಾತಿ ಎಂಬುದು ಸುಶಿಕ್ಷಿತ ಯುವಕರಲ್ಲಿ ಸಂಘರ್ಷಕ್ಕೆ ಕಾರಣವಾಗಿ ಹಾಗೆಯೇ ಮುಂದೆ ಅದು ಬುದ್ಧಿಶಕ್ತಿಯ ಮೂಲಕ ನಗೆಪಾಟಲಾಗುವ ಅಯ್ಯಂಗಾರಿ,

ಅಯ್ಯಂಗಾರಿಯನ್ನು ನಗಪಾಟಲಾಗಿಸುವ ಮುಸ್ತಫಾನ ಕುಚ್ಯೋದ್ಯ ಇಬ್ಬರ ಮನಸ್ಸಿನಲ್ಲೂ ಒಬ್ಬರನೊಬ್ಬರು ಒಡೆಯುವಷ್ಟು ದ್ವೇಷವಿದ್ದರೂ ಶಕ್ತಿಗಿಂತ ಯುಕ್ತಿ ಮೇಲು ಎಂದು ತಮ್ಮ ಪಾತ್ರಗಳ ಮೂಲಕ ಹಾಸ್ಯವನ್ನು ತರುವ ಅವರ ವರ್ತನೆಗಳು ಲೇಖಕರಿಗೆ ಹಾಸ್ಯ ನಿರೂಪಿಸುವಲ್ಲಿ ಸಹಾಯಕವಾಗಿವೆ. ಕೆಲವೊಮ್ಮೆ ತೇಜಸ್ವಿಯವರು ಸಾಮಾನ್ಯ ವ್ಯಕ್ತಿಗಳ ಸಂಭಾಷಣೆ ಮುಖಾಂತರ ಹಾಸ್ಯವನ್ನು ತರುತ್ತಾರೆ. ಅವರ 'ಅಬಚೂರಿನ ಪೋಸ್ಟಾಫೀಸ್' ಎಂಬ ಕತೆಯಲ್ಲಿ ಬೋಬಣ್ಣನಿಂದ ಅವನ ಪೋಸ್ಟಾಫೀಸಾಗಿ ಬರುವ ಪತ್ರಗಳನ್ನು ಕುತೂಹಲಕ್ಕೆ ಓದಿ ನೋಡುವುದು. ಹೀಗೆ ಬಂದ ಪತ್ರಗಳಲ್ಲಿ ಬೇಲಾಯುದನ ಮಗಳು ಬೇರೆ ಮೇಸ್ತ್ರಿಯ ಜೊತೆ ಸಂಬಂಧ ಇರಿಸಿಕೊಂಡಿರುವುದನ್ನು ದಿನಪತ್ರಿಕೆಯಂತೆ ಆ ಊರಿನ ಜನರೆಲ್ಲರೂ ಸೇರಿ ಓದಿ ಬೊಬಣ್ಣನ ಮನೆಯ ಮುಂದೆ ಗೋಷ್ಠಿ ಇಡುತ್ತಾರೆ. ಆಗ ಬೇಲಾಯುಧನ ಮಗಳ ವಿಷಯವಲ್ಲದೆ ಅವನ ಹೆಂಡತಿಯ ವಿಷಯವು ಅಲ್ಲಿ ಬರುತ್ತದೆ.

"ಆ ಕಾಗದದ ಠಸ್ಸೆ ಪರೀಕ್ಷಿಸುವ ನೆವದಿಂದ ಇನ್ನೊಮ್ಮೆ ಗೋಷ್ಠಿಯ ಎಲ್ಲ ಸದಸ್ಯರು ಅದನ್ನು ಓದಿ ಸವಿದರು. ಅದರಲ್ಲಿ ಒಬ್ಬ ಸದಸ್ಯ 'ಬೇಲಾಯುದನ ಹೆಂಡತಿಗೆ ಏನೋ ಚಾಳಿ ಇದೆ. ಅದಕ್ಕೆ ಬೇಲಾಯುಧ ಅವನ ಹೆಂಡತಿ ಬಿಟ್ಟು ಇರುತ್ತಾನೆ. ಎನ್ನುತ್ತಾರಪ್ಪ ಎಂದು ಗೊಣಗಿದನು. ಅದಕ್ಕೆ ಮೊದಲಿನವರು 'ಹ್ಞೂ ಹ್ಞೂ ನಿನಗೆ ಗೊತ್ತಿಲ್ಲ ಮುದುಕರಿಗೆ ಇರುತ್ತೆ ತೆವಲು' ಎಂದು ಮುಸಿ ಮುಸಿ ನಕ್ಕನು. ಆ ಗುಂಪಿನಲ್ಲಿದ್ದ ಓರ್ವ ಕೊಂಚ ವಯಸ್ಸಾದ ವ್ಯಕ್ತಿ ಈ ಮಾತು ತನಗೇ ಅನ್ವಯಿಸುತ್ತದೆ ಎಂದು ಪರಿಭಾವಿಸಿ ಅದನ್ನೊಂದು ಹೊಗಳಿಕೆ ಎಂದು ಗಣಿಸಿ ಹೆಮ್ಮೆಯಿಂದ ನಕ್ಕನು. ಅದಕ್ಕೆ ಮೊದಲು ಮಾತನಾಡಿದ ವ್ಯಕ್ತಿ 'ಹಂಗಲ್ಲ ಪೋಸ್ಟ್ ಮಾಸ್ಟರೇ ಮುದುಕರಿಗೆ ಮುದುಕರ ಮೇಲೆ ಚಪಲ ಇದ್ದಿದ್ದರೆ ಸರಿಯಿರೋದು ಮುದುಕರಿಗೆ ಹುಡುಗರನ್ನು ಕಂಡರೆ ತೆವಲು ಹೆಚ್ಚು ಎಂದನು "ಹಂಗಾರ ಮುದುಕರ ಸಾವಾಸ ಕಷ್ಟ. ಇವರ ಮೇಲೆ ಕೊಂಚ ನಿಗಾ ಇಟ್ಟೇ ಇರಬೇಕು. ಎಂದ ಬೋಬಣ್ಣ. ಅವನ ಮಾತಿಗೆ ಎಲ್ಲರೂ ಮುಸಿ ಮುಸಿ ನಕ್ಕರು"

ಮೊದಲು ಪೋಕರಿಯಾಗಿ ಆಮೇಲೆ ಸಂಸಾರಿಯಾಗಿ 'ನೆಮ್ಮದಿಯಾಗಿ ಕಾಲ ಹಾಕಿದ್ದ ಬೊಬಣ್ಣ ಜೀವನದಲ್ಲಿ ಪೋಸ್ಟಾಫೀಸು ಒಂದು ಬದಲಾವಣೆ ತಂದಿತು. ಕ್ರಮೇಣ ಆ ಕೆಲಸವೂ ಯಾಂತ್ರಿಕವಾಯಿತು. ಹಾಗಾಗಿ ಈ ಹೊಸ ಕೆಲಸವನ್ನು ಹೆಚ್ಚು ರಂಜನೀಯ ಮಾಡಿಕೊಳ್ಳಲು ಹೊಸ ಚೇಷ್ಟೆಗಳನ್ನು ಅವನು ಹಂಚಿಕೊಳ್ಳಬೇಕಾಯ್ತು. ಇಲ್ಲಿ ಲೇಖಕರಿಗೆ ಕಥೆಯ ಮೂಲ ಉದ್ದೇಶವನ್ನು ಹೇಳಲು ಹೆಣೆಯಲು ಈ ಪಾತ್ರಗಳು ಸಹಾಯಕ ಇಲ್ಲಿ ಪಾತ್ರಗಳು ಬರೀ ಪಾತ್ರಗಳಾಗದೆ ತಮ್ಮದೇ ವಿಶಿಷ್ಟ ಛಾಪನ್ನು ಮೂಡಿಸಿವೆ ಎಂಬುದಕ್ಕೆ ಆ ಪಾತ್ರಗಳಿಗೆ ಹಾಸ್ಯದ ಲೇಪನ ಮಾಡಿರುವ ಲೇಖಕರ ಜಾಣ್ಮೆ ಪ್ರಶಂಶನೀಯ. ಇದನ್ನು ತೇಜಸ್ವಿಯವರ ಕಥೆಗಳಲ್ಲಿ ಮುಖ್ಯವಾಗಿ ಬರುವಂತಹ ಪಾತ್ರ. ಮಾರ ಇವನು ಅವರ ಕತೆಗಳಲ್ಲಿ ಮೂಢನಂಬಿಕೆಗಳ ವಕ್ತಾರನಾಗಿಯೇ ಅದರ ಒಳಹು ಹೊರಹುಗಳನ್ನು ಹೇಳುತ್ತಾರೆ. ಮೂಲಿಕ ಬಳ್ಳಿಯ ಸುತ್ತ ಎಂಬ ಕಥೆಯಲ್ಲಿ ಅಪರೂಪದ ಔಷಧಿಬಳ್ಳಿಯ ಬಗ್ಗೆ ಮಾರ

ಹುಡುಕುತ್ತಿರಬೇಕಾದ ಅವನ ಹುಡುಕಾಟದಿಂದ ಬೇಸತ್ತ ನಿರೂಪಕರು ಅದಕ್ಕೆ ಒಂದು ಕತೆ ಹೇಳುತ್ತಾನೆ. ಮಾರ ಮೊಲಕ್ಕೆ ಒಮ್ಮೆ ಕಾಡಿನಲ್ಲಿ ಬಲೆ ಹಾಕಿದ್ದನಂತೆ. ಅದಕ್ಕೆ ರಾತ್ರಿ ಮೊಲಗಳು ಸಿಕ್ಕಿಕೊಂಡರೆ ಇವನಿಗಿಂತ ಮೊದಲೇ ಯಾರಾದರೂ ಅದನ್ನು ನೋಡಿದರೆ ಕದ್ದು ಬಿಡುತ್ತಾರೆಂದು ಮಾರ ಬೆಳಗಿನ ಝಾವವೇ ಎದ್ದು ಕಾಡಿಗೆ ಹೋದ. ಬಲೆಗೆ ಯಾವುದೂ ಮೊಲ ಸಿಕ್ಕಿರಲಿಲ್ಲ. ಅಲ್ಲೆ ಹಳ್ಳ ಹರಿಯುತ್ತಿತ್ತು. ಮಾರ ಅಲ್ಲೇ ಮುಖ ತೊಳೆದುಕೊಂಡು ಮನೆಗೆ ಹೋದರಾಯ್ತೆಂದು ಹಳ್ಳದ ಪಕ್ಕದಲ್ಲಿದ್ದ ಗಿಡ ಒಂದರಿಂದ ಕಡ್ಡಿ ಮುರಿದು ಅದನ್ನು ಜರಿದು ಬ್ರಷ್‌ನಂತೆ ಮಾಡಿ ಬಲಗಡೆಯಿಂದ ಹಲ್ಲು ತಿಕ್ಕಲು ಶುರು ಮಾಡಿದನಂತೆ. ಎರಡು ಸಾರಿ ತಿಕ್ಕುವುದರೊಳಗೆ ಬಾಯೆಲ್ಲ ಒಂದು ಥರಾ ಹುಳ್ಳಗಾಯ್ತು. ಈ ಕಡ್ಡಿ ಯಾಕೋ ಸರಿ ಇಲ್ಲ ಎಂದು ಅದನ್ನು ಎಸೆದು ಇನ್ನೊಂದನ್ನು ತಗೊಳ್ಳುವ ಮೊದಲು ಬಾಯಿ ತೊಳೆದು ಕೊಳ್ಳೋಣ ಎಂದು ಹಳ್ಳದ ನೀರಿನಲ್ಲಿ ಬಾಯಿ ಮುಕ್ಕಳಿಸಿ ಉಗಿದು. ಆ ಕಡ್ಡಿಯಲ್ಲಿ ಉಜ್ಜಿದ ಹಲ್ಲುಗಳಷ್ಟೂ ಒಂದೊಂದಾಗಿ ಕಳಚಿ ಉದುರಿಹೋದವಂತೆ. ಸದ್ಯಕ್ಕೆ ಎಲ್ಲಾ ಹಲ್ಲುಗಳನ್ನೂ ಉಜ್ಜೀರಲಿಲ್ಲ. ಹಾಗಾಗಿ ಬಚವಾದೆ ಇಲ್ಲದಿದ್ದರೆ ಅನ್ನ ತಿನ್ನೋಕು ನನ್ನ ಬಾಯಲ್ಲಿ ಒಂದು ಹಲ್ಲಿ ಇರ್‍ತಿರಲಿಲ್ಲ ಎಂದ ಮಾರ.

ಇಂತಹ ನಂಬಲಾಗದ ಕಥೆಗಳ ಮೂಲಕ ಪರಿಚಯವಾಗುವ ಮಾರ ತನ್ನ ಪಾತ್ರದ ಮೂಲಕ ಹಾಗೂ ತನ್ನ ಸಂಭಾಷಣಾ ಶೈಲಿಯ ಮೂಲಕ ಓದುಗರಿಗೆ ಹಾಸ್ಯಾಸ್ಪದವಾಗಿ ಕಾಣುತ್ತಾನೆ. ಹಾಗೆಯೇ ಅವನು ಮೂಲಿಕೆ ಹುಡುಕುತ್ತಿರಬೇಕಾದರೆ ಲೇಖಕರು ಆಕಸ್ಮಾತ್ ನಿನ್ನ ಹುಡುಗನ್ನ ಮಂಡೋ ಅಂತ ಮೂಲಿಕೆ ಸಿಕ್ಕರೆ ಏನೋ ಮಾಡ್ತಿಯಾ ಎಂದಾಗ ವಯಸ್ಸಾದರೂ ಮಾರ ಕೊಡುವ ಉತ್ತರ ನಿರೂಪಕರೂಡಗೂಡಿ ನಮಗೆ ಹಾಸ್ಯಾಸ್ಪದವಾಗಿದೆ.

"ಅದು ಸಿಕ್ಕಿದರೂ ನನಗೆ ಬ್ಯಾಡ್ರಯ್ಯ, ಹುಡುಗ ಆದರೆ ಮತ್ತೊಂದು ಸಾರಿ ಮದುವೆ ಆಗಬೇಕಲ್ಲ" ಹೀಗೆ ಮಾರ ಅನಕ್ಷರಸ್ಥನಾದರೂ ಅವನ ಜ್ಞಾನದ ಪರಿಧಿಗೆ ತಕ್ಕಂತೆ ಉತ್ತರಗಳನ್ನು ನೀಡುವ ಮೂಲಕ ಓದುಗರ ಮನದಲ್ಲಿ ಉಳಿಯುತ್ತಾನೆ. ಇದರ ಮತ್ತೊಂದು ಕಥೆಯಾದ 'ಕಾಳಪ್ಪನ ಕೋಬ್ರ'ದಲ್ಲಿ ಬೊಂಬಾಯಿಯಿಂದ ಬಂದ ಕಾಳಪ್ಪ ಹಳ್ಳಿಗಾಡಿನ ಸಂಸ್ಕೃತಿಯನ್ನು ದ್ವೇಷಿಸುವ ಅಸಹ್ಯ ಪಟ್ಟುಕೊಳ್ಳುವ ಪಾತ್ರವಾಗಿ ಬಂದರು ಅವನ ವರ್ತನೆ ವೇಷಭೂಷಣನ ಹಾಸ್ಯಾಸ್ಪದವಾದವಾಗುತ್ತದೆ. ಎತ್ತಿನಗಾಡಿನ ಮೇಲೆ ಬಿರುಬಿಸಿಲಿನಲ್ಲಿ ಹ್ಯಾಟು, ಚರ್ಮದ ಜರ್ಕಿನ್, ಕೋಟು, ಜೀನ್ಸ್ ಪ್ಯಾಂಟು, ಬಿಸಿಲು ಕನ್ನಡಕ ಎಲ್ಲಾ ಧರಿಸಿ ಎತ್ತಿನಗಾಡಿ ಹೊಡೆದುಕೊಂಡು ಬರುತ್ತಿದ್ದ ಕಾಳಪ್ಪನನ್ನು ಕಂಡು ಬೊಂಬಾಯಿ ಸಂಸ್ಕೃತಿಯನ್ನು ಕಗ್ಗಾಡಿನ ಹಳ್ಳಿಯವರೆಗೆ ಮನವರಿಕೆ ಮಾಡಿಕೊಡಲೆಂದೆ ಅವನ ಮೂಲ ಉದ್ದೇಶವಾಗಿದ್ದರೂ ನಿರೂಪಕರಿಗೆ ಅವನು ಹೇಳುವ ಮಾತುಗಳು ಓದುಗರಿಗೆ ಹಾಸ್ಯಾಸ್ಪದವಾಗಿ ಕಾಣುತ್ತದೆ.

"ಪ್ರೂಟ್ಸ್ ತಿನ್ನೋಣ ಎಂದರೆ ಪ್ರೂಟ್ಸ್ ಇಲ್ಲ ಮಿಲ್ಕ್ ಕುಡಿಯೋಣ ಎಂದರೆ ಮಿಲ್ಕ್ ಇಲ್ಲ. ಯಾಕಿರಬೇಕು ಸ್ವಾಮಿ ಈ ಹಳ್ಳೀಲಿ. ನಾನು ನಾಲ್ಕು ದಿನ ರಜೆ ತೆಗೆದುಕೊಂಡು ಬಂದಿದ್ದೇನೆ. ಅಷ್ಟೇ

ಆಮೇಲೆ ಮತ್ತೇ ಬೊಂಬಾಯಿಗೆ ಹೋಗುತ್ತೇನೆ ಎಂದು ಹೇಳಿದ ತಾನು ಕಲಿತಿರುವ ಹಿಂದಿ ಭಾಷೆ ತೋರಿಸಿಕೊಳ್ಳಲು ಏನೋ ನಾನು ಯಾವ ಮಾತನಾಡಿದರೂ ತಾರತಮ್ಯ ತೋರದೆ ಅಚ್ಚಾ ಎಂದು ಹೇಳಿ ತನ್ನ ಮಾತು ಆರಂಭಿಸುತ್ತಿದ್ದ.

ನಮ್ಮಪ್ಪ ಗದ್ದೆಯಲ್ಲಿ ದುಡಿದು ನಮ್ಮಮನಿಗೆ ಎಷ್ಟು ಸೀರೆ ತಂದುಕೊಟ್ಟಿದ್ದಾನೆ ಕೇಳಿ. ನಾನು ಬರುತ್ತಾ ಭಕ್ಷಿಸ್ ದುಡ್ಡಿನಲ್ಲಿ ಸೀರೆ ತಂದು ಕೊಟ್ಟರೆ ಉಂಟು. ಯಾಕೆ ಬೆಳಿ ಬೇಕು ಈ ಬ್ಲಡಿ ಭತ್ತ. ಎಂದು ಭತ್ತಕ್ಕೆ ಉಗಿದ. ತೆಳ್ಳಗೆ ಬಿಳಿಚಿಕೊಂಡಿದ್ದ ಇವನು ಹಳ್ಳಿಯಲ್ಲಿ ವ್ಯವಸಾಯದ ಕಷ್ಟ ಜೀವನಕ್ಕೆ ಒಗ್ಗಲಾರ ಎನಿಸಿತು. ಆದರೆ ಪ್ರೂಟ್ಸ್ ತಿಂದು ಮಿಲ್ಕ್ ಕುಡಿದ ಇವನ್ಯಾಕೆ ಬ್ಲಡಿ ಭತ್ತ ತಿಂದ ಹಳ್ಳಿಯವರಿಗಿಂತ ದುರ್ಬಲನಾಗಿದ್ದಾನೆಂದು ಯೋಚಿಸಿದೆ. ಇಲ್ಲಿ ಕಾಳಪ್ಪ ವಿದೇಶಿ ಸಂಸ್ಕೃತಿಯನ್ನು ತಾನು ಪ್ರತಿಬಿಂಬಿಸುತ್ತಿರುವಂತೆ ಕಂಡರೂ ತನ್ನನ್ನು ತಾನು ಅರಿಯದ ಮೂಢನ ಪಾತ್ರವಾಗಿ ಈ ಕತೆಯಲ್ಲಿ ಹಾಸ್ಯವನ್ನು ಓದುಗರರಿಗೆ ಹೇಳುತ್ತಾನೆ. ವ್ಯಕ್ತಿ ನಾಗರೀಕನಂತೆ ಕಂಡರೂ ಅವನ ವ್ಯಕ್ತಿತ್ವ ಭಾಷೆ ಅನಾಗರೀಕ ಎಂಬುದನ್ನು ನಿರೂಪಕರು ಇಲ್ಲಿ ಸ್ಪಷ್ಟಿಕರಿಸುತ್ತಾರೆ. ಇನ್ನು ಕೆಲವೊಮ್ಮೆ ನಿರೂಪಕರೇ ಹಾಸ್ಯವನ್ನು ರೂಢಿಸಿಕೊಂಡಿರುವುದನ್ನು ಇನ್ನೂ ಇವರ ಹಲವು ಕಥೆಗಳಲ್ಲಿ ನಾವು ಕಾಣಬಹುದಾಗಿದೆ. ಅವರ 'ಕೆರೆಯ ದಡದಲ್ಲಿ' ಎಂಬ ಕತೆಯಲ್ಲಿ ಮರಕುಟಕ ಯಾವ ರೀತಿ ಮರವನ್ನು ಕುಕ್ಕಿ ತನ್ನ ಗೂಡು ಮಾಡಿಕೊಳ್ಳುತ್ತದೆ ಎಂಬುದಕ್ಕೆ ಅವರು ನೀಡುವ ವಿವರಣೆ ತಿಳಿಹಾಸ್ಯವನ್ನು ತರುತ್ತದೆ.

"ಮೊನ್ನೆ ಬಾಗಿಲು ದಾಟುವಾಗ ಹೊಸಲು ನನ್ನ ಹಣೆಗೆ ಮೆಲ್ಲಗೆ ತಾಗಿದ್ದಕ್ಕೆ ತಲೆ ಸುತ್ತಿ ಬಂದು ಕಾಲುಗಂಟೆ ಕುಳಿತು ಸುಧಾರಿಸಿಕೊಂಡಿದ್ದೆ. ಮರುಕುಟಕನ ಹಕ್ಕಿ ಬಡಬಡ ಮರಕ್ಕೆ ತಲೆ ಚಚ್ಚುವುದನ್ನು ನೋಡಿ ನನಗೆ ತಲೆ ಸುತ್ತಿಬಂದಂತಾಯಿತು. ಆ ಹಕ್ಕಿ ತಲೆಯೊಳಗಿರುವ ಮೆದುಳಿನ ಕತೆ ಏನು? ಅಲ್ಲಿ ರಕ್ತಸ್ರಾವ ಆಗಿ ಅದು ಸಾಯದೇ ಉಳಿದಿರುವುದು ಹೇಗೆ?

ಇಲ್ಲಿ ವೈಜ್ಞಾನಿಕ ಚಿಂತನೆಯ ಮೂಲಕ ತೇಜಸ್ವಿಯವರು ಮರಕುಟಕವನ್ನು ವಿವರಿಸುವ ಗೋಜಿಗೆ ಹೋಗದೆ ಸರಳ ತಿಳಿಹಾಸ್ಯದ ಮೂಲಕ ಅದರ ಗಟ್ಟಿತನವನ್ನು ಮನುಷ್ಯನು ಎಷ್ಟು ಬುದ್ಧಿವಂತನಾದರೂ ಶಕ್ತಿವಂತನಾದರೂ ಮೂಕಪ್ರಾಣಿಗೆ ಸಮನಾಗಲಾರ ಎಂಬುದನ್ನು ತಿಳಿಸುತ್ತದೆ. ಹಾಗೆಯೇ ಇವರ 'ಪಾಕಕ್ರಾಂತಿ' ಎಂಬ ಕತೆಯಲ್ಲಿ ತಾವು ಮಾಡಿದ ಅಡುಗೆ ಯಾವುದಕ್ಕೂ ಲಾಯಕ್ಕಿಲ್ಲ ಎಂಬುದನ್ನು ಹೇಳುವಾಗ ಅಪರೂಪಕ್ಕೆ ಹೆಂಡತಿ ಊರಿಗೆ ಹೋದಾಗ ಅಡುಗೆ ಒಂದು ದೊಡ್ಡ ವಿಷಯವು ಅಲ್ಲ ಎಂದು ತಿಳಿದ ಇವರಿಗೆ ಅದನ್ನು ಮಾಡಿದಾಗ ಅದರ ಆಳ ಏನು ಎಂದು ತಿಳಿಯುತ್ತದೆ. ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ ಎಂಬಂತೆ ಅಡುಗೆ ಏನು ಮಹಾ ಎಂದು ಹೇಳಬಹುದು ಆದರೆ ಅದನ್ನು ಮಾಡಬೇಕಾದರೆ ಜಾಣ್ಮೆ, ಪರಿಶ್ರಮ ಎಷ್ಟು ಮುಖ್ಯ ಎಂಬುದನ್ನು ಅವರ ಈ ಕತೆಯಲ್ಲಿ ನಾವು ತಿಳಿಯಬಹುದು. ತಾವು ಮಾಡಿದ ಅಡುಗೆ ತಮಗೆ ಯಾಕೆ ಅವರ ನಾಯಿಯೂ ಸಹ ತಿನ್ನಲಿಲ್ಲ

ಎಂಬುದಕ್ಕೆ ಅವರು ಹೇಳುವ ವಿವರಣೆ ತಮ್ಮನ್ನು ತಾವೇ ಹಾಸ್ಯಕ್ಕೆ ಗುರಿಮಾಡಿಕೊಳ್ಳುವ ರೀತಿಯನ್ನು ಹೇಳುತ್ತದೆ.

"ಆ ಮರದ ನೆರಳಿನಿಂದ ಎದ್ದು ಪಕ್ಕದಲ್ಲಿದ್ದ ಇನ್ನೊಂದು ಮರದ ನೆರಳಿಗೆ ಹೋಗಿ ಕುಳಿತಿತು. ಇವನು ಮಾಡಿದ ಊಟ ತಿನ್ನುವುದರ ಬದಲು ಉಪವಾಸ ಸಾಯುವುದೇ ಒಳ್ಳೆಯದೆಂದು ಅದು ದೃಢನಿರ್ಧಾರ ಮಾಡಿದಾಗಿತ್ತು"೮

ಇಲ್ಲಿ ನಾಯಿಯ ವರ್ತನೆಯನ್ನು ತಾವು ಮಾಡಿದ ಅಡುಗೆಯ ಮುಖಾಂತರ ತಮ್ಮನ್ನು ತಾವೇ ವಿಡಂಬನೆಗೆ ಗುರಿ ಮಾಡಿಕೊಳ್ಳುವ ನಿರೂಪಕ ಹಾಸ್ಯಕ್ಕೊಸ್ಕರ ಹಾಸ್ಯ ಎನ್ನದೇ ಬದಲಾವಣೆಗೊಸ್ಕರ ಹಾಸ್ಯವನ್ನು ತಮ್ಮ ಪಾತ್ರದ ಮೂಲಕ ತಂದಿರುವುದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ತೇಜಸ್ವಿಯವರ ಕತೆಗಳಲ್ಲಿ ಬರುವ ಪಾತ್ರಗಳು ಕೇವಲ ಹಾಸ್ಯವನ್ನು ಪ್ರತಿಬಿಂಬಿಸಲು ಬಂದಿಲ್ಲ. ಆದರೆ ಅವರ ಮೂಲವರ್ತನೆಗಳು ಭಾಷೆ, ವ್ಯಕ್ತಿತ್ವ ಇದು ಲೇಖಕರ ಪಾತ್ರ ನಿರೂಪಣಾ ವಿಧಾನದ ಮೂಲಕ ಹಾಸ್ಯವನ್ನು ಸ್ಫುರಿಸುತ್ತವೆ ಎಂದು ಹೇಳಬಹುದಾಗಿದೆ.

**೬.೨ ಕಥೆಗಳಲ್ಲಿ ಹಾಸ್ಯ ಹಾಗೂ ಭಾಷೆ :–**

ಕನ್ನಡ ಸಾಹಿತ್ಯದಲ್ಲಿ ಭಾಷಾ ಬಳಕೆಯನ್ನು ಕುರಿತಂತೆ ಚಳುವಳಿಯೇ ನಡೆದಿದೆ. ಪಂಪನ ಕಾಲದ ಭಾಷೆಗೂ ವಚನಕಾರರ ಕಾಲದ ಭಾಷೆಗೂ ತುಂಬಾ ವ್ಯತ್ಯಾಸವಿದೆ. ಈ ವ್ಯತ್ಯಾಸ ಗಮನಾರ್ಹವಾದುದು. ವಚನಕಾರರು ಸರಳವಾದ ಭಾಷೆಯ ಮುಖಾಂತರ ತಮ್ಮ ವಚನಗಳನ್ನು ಜನಸಾಮಾನ್ಯರ ಮಟ್ಟಿಗೂ ತಲುಪಿಸುವಲ್ಲಿ ಯಶಸ್ವಿಯಾದರು. ಸಮಾಜವನ್ನು ಕುರಿತಂತೆ ರಚನೆಯಾದಂತಹ ಸಾಹಿತ್ಯವು ಸಮಾಜದ ಜನರು ಅರ್ಥೈಸುವ ಮಟ್ಟಿಗೆ ಇರಬೇಕು. ಒಂದು ಸಾಹಿತ್ಯ ಕೃತಿಯ ಭಾಷೆಯೂ ಜನಸಾಮಾನ್ಯರ ಮಧ್ಯೆ ಬಳಕೆಯಾಗುವ ಭಾಷೆಯಾದಾಗ ಅದು ಮಹತ್ವವನ್ನು ಪಡೆದುಕೊಳ್ಳುತ್ತದೆ.

ತೇಜಸ್ವಿಯವರು ಭಾಷೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ "ಅನುಭವದ ಸೂಕ್ಷ್ಮಾತಿಸೂಕ್ಷ್ಮಗಳನ್ನು ಆಳ ಪಾತಾಳದ ಸತ್ಯಗಳನ್ನು ಅಭಿವ್ಯಕ್ತಿಸಲು ಭಾಷೆಯನ್ನು ಸೌಷ್ಠವ ಗೊಳಿಸುವುದು. ಜನ ಸಮಷ್ಠಿಯ ಸಂಕೀರ್ಣ ಜವಾಬ್ದಾರಿ ಲೇಖಕ ಈ ಸಮಷ್ಠಿಯಲ್ಲಿ ಒಬ್ಬ ಲೇಖಕನು ಭಾಷೆಯ ಮೂಲಕ ಮಾಡಬೇಕಾದ ಸೇವೆ ಎಂದರೆ ಈ ಬಗೆಯದೇ ಎಂದು ತೇಜಸ್ವಿ 'ಹುಲಿಯೂರಿನ ಸರಹದ್ದು'೯ ಮುನ್ನುಡಿಯಲ್ಲಿ ತಿಳಿಸಿದ್ದಾರೆ.

ಸೃಜನಶೀಲ ಸಾಹಿತಿಯು ತನ್ನ ಅನುಭವಗಳನ್ನು ಸಾಹಿತ್ಯದಲ್ಲಿ ವ್ಯಕ್ತಪಡಿಸಬೇಕಾದರೆ ತನ್ನದೇ ಆದ ಭಾಷೆಯನ್ನು ರೂಢಿಸಿಕೊಳ್ಳಬೇಕು. ಅಕ್ಷರ ಜಗತ್ತಿನಲ್ಲಿ ಭಾಷೆಯು ಮಹತ್ವದ ಪಾತ್ರವನ್ನು ವಹಿಸುತ್ತದೆ. ಭಾಷೆಯ ಮುಖಾಂತರ ಲೇಖಕನ ಅನುಭವಗಳು ಮರುಸೃಷ್ಟಿಗೊಳ್ಳುತ್ತದೆ. ಲೇಖಕನು

ಬಳಸುವ ಭಾಷೆಯೂ ಸಹೃದಯನ ಅಂತಃಕರಣವನ್ನು ತಲುಪುವಂತೆ ಇರಬೇಕು. ಲೇಖಕನು ಕೃತಿಯ ವಸ್ತು ಅಭಿವ್ಯಕ್ತಿ ಕ್ರಮಕ್ಕೆ ತಕ್ಕಂತೆ ಭಾಷೆಯನ್ನು ಬಳಸಿಕೊಳ್ಳುವುದು. ಕನ್ನಡ ಸಾಹಿತ್ಯದಲ್ಲಿ ರೂಢಿಯಲ್ಲಿದೆ.

ಲೇಖಕನು ಭಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡು ತನ್ನ ಅನುಭವ ಲೋಕವನ್ನು ಸೃಜಿಸಿದಾಗ ಭಾಷೆಯ ಕಾರ್ಯ ಭಾಗಶಃ ಯಶಸ್ವಿಯಾಗುತ್ತದೆ. ಲೇಖಕನು ಭಾಷೆಯನ್ನು ಬಳಸಬೇಕೆಂಬ ಉದ್ದೇಶದಿಂದ ಭಾಷೆಯನ್ನು ಬಳಸುವುದಿಲ್ಲ. ಹಾಗೆ ಬಳಸಿದರೆ ಅದು ಕೇವಲ ಪದಗಳ ಗುಚ್ಛವಾಗಿ ಉಳಿದುಬಿಡುವಂತಹ ಸಾಧ್ಯತೆಗಳಿರುತ್ತವೆ. ಅದನ್ನು ಮೀರಿ ತನ್ನ ಚಿಂತನೆ ಅನುಭವಗಳನ್ನು ಭಾಷೆಯಲ್ಲಿ ವ್ಯಕ್ತಪಡಿಸಿದಾಗ ಭಾಷೆಯೂ ಕೊಳಲಿನ ರೀತಿ ಬಳಕೆಯಾಗುತ್ತದೆ. ಇಲ್ಲದಿದ್ದರೆ ಭಾಷೆಯೂ ಬಿದಿರಾಗಿಯೇ ಉಳಿಯುತ್ತದೆ.

ತೇಜಸ್ವಿ ತಮ್ಮ ಭಾಷೆಯನ್ನು ಯಾವುದೇ ಮುಜುಗರವನ್ನು ಕಾಣದೇ ಅತ್ಯಂತ ವಸ್ತುನಿಷ್ಠವಾಗಿ ವರ್ಣಿಸುತ್ತಾರೆ. ತೇಜಸ್ವಿಯವರ ಭಾಷೆಯೂ ವಾಸ್ತವಿಕತೆಯನ್ನು ಕಟ್ಟಿಕೊಡುವಲ್ಲಿ ತನ್ನದೇ ಆದ ಮಹತ್ವದ ಪಾತ್ರವನ್ನು ವಹಿಸುತ್ತದೆ. ತೇಜಸ್ವಿಯವರು ತಮ್ಮ ಸಾಹಿತ್ಯದಲ್ಲಿ ಬಳಸುವ ಭಾಷೆಯಿಂದ ತಮ್ಮನ್ನು ಗುರ್ತಿಸಿಕೊಂಡಿದ್ದಾರೆ.

ತೇಜಸ್ವಿಯವರ ಭಾಷೆಯ ಬಗ್ಗೆಯೂ ಆರ್.ಅನಂತಮೂರ್ತಿಯವರು ಹೇಳಿರುವಂತೆ "ತೀವ್ರಕಾಳಜಿಯನ್ನು ತುಸು ಉಡಾಫೆಯಾಗಿ ನೋಡಲು ಸಾಧ್ಯವಾದರೆ ಅದರಿಂದ ನೆಮ್ಮದಿ ದೊರೆಯುತ್ತದೆ. ಅಂತಹ ಭಾಷೆಯನ್ನು ತೇಜಸ್ವಿ ತಮ್ಮ ಬರಹಗಳಲ್ಲಿ ಬಳಸಿದರು. ತೇಜಸ್ವಿಯವರ-ಭಾಷೆ ಉಡಾಫೆ ನವಿರು ಹಾಸ್ಯದಿಂದ ಕೂಡಿದ್ದು, ಬದುಕಿನ ಸೂಕ್ಷ್ಮಗಳನ್ನು ಒಳಗೊಂಡಿದೆ. ಕವಿಯ ಅಹಂಕಾರ ಮೀರಿದ ಸ್ಥಿತಿಯನ್ನು ಇದು ತೋರುತ್ತದೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ. ತೇಜಸ್ವಿಯವರು ಸುಂದರವಾದ ಭಾಷೆಯಲ್ಲಿ ಮತ್ತು ಇಂಗ್ಲೀಷ್ ಭಾಷೆಗಳ ಪ್ರಭಾವವಿಲ್ಲದೆ ಅಚ್ಚಕನ್ನಡ ಶೈಲಿಯೊಂದನ್ನು ತೇಜಸ್ವಿ ರೂಪಿಸಿಕೊಂಡಿದ್ದಾರೆ. ಎಂತಹ ಜಟಿಲ ತಾತ್ವಿಕ ವಿಷಯದ ಬಗ್ಗೆ ಇದರಷ್ಟು ಸರಳವಾಗಿ ತಿಳಿಯಾಗಿ ಬರೆಯುವವರು ಕನ್ನಡದಲ್ಲಿ ತೀರವಿರಳ"ಎಂದು ತೇಜಸ್ವಿಯವರ ಶೈಲಿಯ ಬಗ್ಗೆ ಟಿ.ಪಿ. ಅಶೋಕರವರು ಅಭಿಪ್ರಾಯ ಪಡುತ್ತಾರೆ. ವಿಜ್ಞಾನದಂತಹ ಜಟಿಲ ವಿಷಯವನ್ನು ಹೇಳುವಾಗ ಅಷ್ಟೇ ಜಟಿಲವಾಗಿ ನಿರೂಪಿಸದರೆ ಓದುಗರಿಗೆ ತಲುಪುವುದಿಲ್ಲ. ಆದ್ದರಿಂದ ತೇಜಸ್ವಿಯವರು ತಮ್ಮದೇ ಆದ ಭಾಷೆಯನ್ನು ರೂಪಿಸಿಕೊಂಡಿದ್ದು ವಿಶೇಷವೇ ಸರಿ.

ತೇಜಸ್ವಿಯವರ ಕತೆಗಳಲ್ಲಿ ಬಳಕೆಯಾಗಿರುವ ಭಾಷೆಯನ್ನು ಭಾಷಶಾಸ್ತ್ರದ ದೃಷ್ಟಿಯಿಂದ ನೋಡುವ ಕ್ರಮವಲ್ಲ. ಅದನ್ನು ಸಾಂಸ್ಕೃತಿಕ ಅನನ್ಯತೆಯ ಪ್ರಶ್ನೆಯಾಗಿ ಒಂದು ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಎಷ್ಟರಮಟ್ಟಿಗೆ ತನ್ನ ಪಾತ್ರವನ್ನು ವಹಿಸಿದೆ, ಎಂದು ನೋಡುವ ಉದ್ದೇಶವಿದೆ. ಅವರೇ ಹೇಳುವಂತೆ ಧ್ವನ್ಯಾರ್ಥವು ವಾಚ್ಯಾರ್ಥದ ವಿಸ್ತರಣೆಯಾಗಿ ಬರಬೇಕು ಹೊರತು ಅದರ ಅರ್ಥವಂತಿಕೆಯನ್ನು ಹೆಚ್ಚಿಸಲು ನಾವು ಆರೋಪಿಸಿದ್ದಾಗಿರಬಾರದು ಎಂದು ತೇಜಸ್ವಿಯವರು ವಾಚ್ಯಾರ್ಥ

ಹಾಗೂ ವ್ಯಂಗ್ಯಾರ್ಥದ ಬಗ್ಗೆ ಕಾವ್ಯಮೀಮಾಂಸಕರಾಗಿ, ಭಾಷಾಮೀಮಾಂಸಕರಾಗಿ ವಾದ ಮಂಡಿಸುತ್ತಾರೆ. ಈ ಕಾರಣದಿಂದ ತೇಜಸ್ವಿಯವರ ಸಾಹಿತ್ಯದ ಭಾಷೆ ವೈನೋದಿಕವಾಗಿ ಹಾಸ್ಯಮಿಶ್ರಿತವಾಗಿ ಕಂಡುಬರುತ್ತದೆ. ಎಂತಹ ಗಂಭೀರ ವಿಷಯಗಳನ್ನೇ ಆಗಲಿ ಸರಳವಾಗಿ ತಲುಪಿಸುವ ಉದ್ದೇಶದಿಂದ ತೇಜಸ್ವಿಯವರು ನವಿರು ಹಾಸ್ಯಮಿಶ್ರಿತ ಭಾಷೆಯನ್ನು ಆಯ್ಕೆ ಮಾಡಿಕೊಂಡರು ಎಂದು ಹೇಳಬಹುದು. ಮೊದಲಿಗೆ ಅವರ 'ನಿಗೂಢ ಮನುಷ್ಯರು' ಕತೆಯಲ್ಲಿ ಗೋಪಾಲಯ್ಯ ತನ್ನ ಬದುಕಿನ ಸಾರ್ಥಕ್ಯಗಳನ್ನು ಹೇಳುವಾಗ ಅದನ್ನು ಹಾಸ್ಯದ ಕಡೆಗೆ ಹರಿಸುವಲ್ಲಿ ಅವನ ಭಾಷೆ ಸರಳ ಸೂಕ್ಷ್ಮ ಎಂದೇ ಹೇಳಬೇಕು.

"ಈ ನಡುವೆ ಒಮ್ಮೆ ನಾನು ಮದುವೆಯಾದೆ. ಈ ಘಟನೆ ಮತ್ತು ನಿರ್ಧಾರ ಇಂದಿಗೂ ನನಗೆ ಬಗೆಹರಿಯದ ಸಮಸ್ಯೆಯಾಗಿದೆ. ಆಕೆಗೆ ನಾನೇನೂ ಕೆಲಸದಲ್ಲಿರುವನೆಂದು ಗೊತ್ತಿರಲಿಲ್ಲ. ಈಗ ಅನ್ನಿಸುತ್ತೆ ಆಕೆಯ ಗಂಡನೆಂಬ ಒಂದು ಪಾತ್ರವಹಿಸಿದ್ದೆ ನಾನು ಎಂದು. ಸಂಭೋಗವನ್ನು ನಟಿಸಬಹುದೆಂದು ನೀವು ನಂಬುತ್ತೀರಾ ಜಗನ್ನಾಥ? ಹ್ಹ ಹ್ಹ ಹ್ಹ ..."

ಹೀಗೆ ನಡೆಯುವ ಅವರ ಸಂಭಾಷಣೆಯಲ್ಲಿ ಭಾಷೆಯೂ ತುಂಬ ಪ್ರಮುಖ ಪಾತ್ರವಹಿಸುತ್ತದೆ. ಗಂಡಹೆಂಡಿರ ಸಂಬಂಧದ ಮೂಲಕ ಕಾಮದ ವಿಶ್ಲೇಷಣೆ ಮಾಡುವುದು ತುಂಬಾ ಕಷ್ಟ. ಇಂತಹ ಸಂದರ್ಭಗಳಲ್ಲಿ ತಮ್ಮ ವಿಶಿಷ್ಟಭಾಷೆಯ ರಚನಾವಿನ್ಯಾಸವನ್ನು ಬಳಸಿಕೊಂಡವರು ತೇಜಸ್ವಿ ಹೀಗೆ ಅವರು ಎಂತಹ ಗಂಭೀರ ವಿಷಯವನ್ನು ತಮ್ಮ ಭಾಷೆಯ ಮೂಲಕ ಹಾಸ್ಯವನ್ನಾಗಿ ಮಾಡಬಲ್ಲರು. ಹಾಗೆಯೇ ಅವರ 'ಅವಾಂತರದ ಸೀನಪ್ಪ' ಎಂಬ ಕತೆಯಲ್ಲಿ ಸೀನಪ್ಪ ಅರ್ಧಂಬರ್ಧ ಕೆಲಸ ಮಾಡುವುದಕ್ಕೆ ಹೆಸರುವಾಸಿ. ಇಂತಹ ಸೀನಪ್ಪನಿಗೆ ನಿರೂಪಕರು ತಮ್ಮ ತೊಟ್ಟಿ ಸರಿಮಾಡುವಂತೆ ಹೇಳುತ್ತಾರೆ. ಆದರೆ ಸೀನಪ್ಪ ಇರುವ ತೊಟ್ಟಿಯನ್ನು ಹೊಡೆದುಹಾಕಿ ಅವಾಂತರ ಮಾಡಿ ಕೆಲಸಕ್ಕೆ ಬರದೇ ತಪ್ಪಿಸಿಕೊಳ್ಳುತ್ತಾನೆ. ಆಗ ನಿರೂಪಕರು ಅವನನ್ನು ಹುಡುಕಿ ಕಾರಣ ಕೇಳಿದಾಗ ಅವನು ನೀಡುವ ಉತ್ತರವನ್ನು ನಿರೂಪಕರು ಧ್ವನ್ಯಾರ್ಥದ ಮೂಲಕ ವಿವರಿಸುವುದು ಹಾಸ್ಯಾಸ್ಪದವಾಗಿದೆ.

"ಸೀನಪ್ಪ ಐವತ್ತು ರೂಪಾಯಿ ಅಡ್ವಾನ್ಸ್ ತಗೊಂಡು ಹೋದವನು ಇವತ್ತು ಕಾಣಸಿಕ್ಕಿದ್ಯಾ? ಮನೆಯಲ್ಲಿ ತೊಂದರೆ ಆಗುತ್ತೆ ಬೇಗ ಮಾಡಿಕೊಡು ಎಂದರೆ ನಿನಗೆ ಅರ್ಥವಾಗುವುದಿಲ್ಲವೇ? ಎಂದು ಗದರಿಸಿದೆ.

ನಿಮ್ಮ ದುಡ್ಡು ತಿಂದುಕೊಂಡು ಓಡಿಹೋಗ್ತಿನಾ ನನ್ನ ಪ್ರಾಣ ಒಂದಿದ್ದರೆ ನಿಮ್ಮ ಕೆಲಸ ಮಾಡಿಕೊಡ್ತಿನೊ ಇಲ್ಲವೋ ನೋಡಿ ನನ್ನ ಗಾರೆ ಸಾಮಾನೆಲ್ಲ ನಿಮ್ಮ ಶೆಡ್ಡಿನಲ್ಲೇ ಇಟ್ಟಿದ್ದಿನಲ್ಲ ಎಂದ. ನನ್ನ ಕೆಲಸ ಮಾಡಿಕೊಡಲು ಸೀನಪ್ಪ ನಿಗದಿ ಮಾಡುತ್ತಿದ್ದ ಕಾಲಾವಾಧಿ ನೋಡಿ ನನಗೆ ದಿಗಿಲಾಯಿತು. ಪ್ರಾಣ ಒಂದಿದ್ದರೆ ಮಾಡುತ್ತೇನೆಂದರೆ ಏನರ್ಥ? ಸಾಯುವುದರೊಳಗೆ ಮಾಡುತ್ತೇನೆಂದು

ಎಂದು ಹೇಳುವಾಗ ಅವರು ಧ್ವನ್ಯಾರ್ಥ ಸಾಮಾನ್ಯರು ತಿಳಿಯುವಂತಹ ಭಾಷೆಯಲ್ಲಿ ಹೇಳುವುದು ಅವರ ಸರಳಭಾಷಾ ನಿರೂಪಣೆಗೆ ಸಾಕ್ಷಿ. ಅವರ ಮತ್ತೊಂದು ಕತೆಯಾದ 'ಮಾಯಾಮೃಗ'

ರಾಷ್ಟ್ರದ ಅತ್ಯುತ್ತಮ ಕತೆಗಳಲ್ಲಿ ಒಂದೆಂದು ಪರಿಗಣಿತವಾಗಿ ಪ್ರಶಸ್ತಿಯನ್ನು ಪಡೆದಿದೆ. 'ಸಾವು' ಇದರ ಕಥಾವಸ್ತು ದೆವ್ವದ ಬಗ್ಗೆ ನಂಬಿಕೆಯಿಲ್ಲದ ಸ್ನೇಹಿತರಿಬ್ಬರು ಸ್ಮಶಾನದಲ್ಲಿ ದೆವ್ವ ಇದೆಯೇ? ಇಲ್ಲವೇ? ಎಂಬುದನ್ನು ಪರೀಕ್ಷಿಸಲು ಹೋಗಿ ಕೊನೆಗೆ ಅವರು ಎದುರಿಸುವ ಸಂಶಯ ಗುಮಾನಿಗಳು ಕತೆಯಲ್ಲಿ ಹಾಸ್ಯಾಸ್ಪದವಾಗಿ ಮೂಡಿಬಂದಿದೆ. ನಿರೂಪಕರ ಸ್ನೇಹಿತರಾದ ಷಾ ದೆವ್ವ ಯಾವ ರೂಪ ಬೇಕಾದರೂ ಧರಿಸಿ ನಮ್ಮ ಹತ್ತಿರ ಬರಬಹುದು. ಆದ್ದರಿಂದ ನಾವು ಒಂದು ಸಾಂಕೇತಿಕ ಭಾಷೆಯನ್ನು ಇಟ್ಟುಕೊಂಡು ಗುರುತಿಸಿಕೊಳ್ಳೋಣ ಎಂದು ಹೇಳುತ್ತಾರೆ. ಅದಕ್ಕೆ ನಿರೂಪಕರೂ ಸಹ ಒಪ್ಪುತ್ತಾರೆ.

"ಚುಂ ಚಿಟ್ಸಂ ಕುಂಟ್ಸು ಪು" ಎಂದರು ಷಾ

ಹಾಗೆಂದರೇನೆಂದು ತೋಚದೆ ತುಂಬಾ ಗಲಿಬಿಲಿಗೊಂಡು ಅವರ ಮುಖ ನೋಡಿದೆ.

ಮಂತ್ರ ಕಣ್ರೀ ಅದು!

ಇದೆಂಥಾ ಮಂತ್ರ ರೀ? ಮೇಡಿನ ಜಪಾನ್ ಮಂತ್ರ

ಇದ್ದಂಗಿದೆಯಲ್ಲ ಜಪಾನ್ ಭಾಷೆನೇನ್ರಿ?

ಇದು ಮೇಡಿನ್ ಚೈನಾ. ಚೈನೀ ಪದಗಳು ಕಣ್ರೀ ಇದು ನಮ್ಮಿಬ್ಬರಿಗೂ ಸಂಕೇತ ಪದಗಳು ನಾನು ನಿಮ್ಮನ್ನು ಕರೆದ ಕೂಡಲೇ ನೀವು ಚುಂಬಿಟ್ಸಂ ಅಂದು ಅನಂತರ ಮಾತು ಶುರುಮಾಡಬೇಕು. ನೀವು ನನ್ನನ್ನು ಕರೆದರೆ ನಾನು ಕುಂಗ್ ಟ್ಸು ಪು ಎನ್ನುತ್ತೇನೆ. ಈ ಸಂಕೇತ ಹೇಳದಿದ್ದರೆ ಅದೇ ದೆವ್ವ ನಾನಲ್ಲ ಎಂದು ಅರ್ಥ.

"ಇದ್ಯಾಕೆ ಚೈನಿ ಪದ ಹೇಳಬೇಕು. ಇನ್ನಾವುದಾದರೂ ಕನ್ನಡದ್ದು, ಸಂಸ್ಕೃತದೊ ಪದ ಹೇಳುವುದು ಒಳ್ಳೆಯದಲ್ಲವೇ?

ಬೇಡ ಇದು ಮೊನ್ನೆ ಭಾಷಾಶಾಸ್ತ್ರ ಪಾಠ ಮಾಡುತ್ತಾ ನಮ್ಮ ಮೇಷ್ಟ್ರು ಹೇಳಿದ್ದು ನಮ್ಮ ಭಾಷೆ ಪದಗಳೇ ಆದರೆ ದೆವ್ವ ಸಹ ತಿಳಿದುಕೊಂಡು ದುರುಪಯೋಗ ಮಾಡಬಹುದೆಂದರು.

ಇಲ್ಲಿ ಇವರ ಅನ್ವೇಷಣೆ ಗಂಭೀರ ವಿಷಯವಾದರೂ ಇಲ್ಲಿ ಭಾಷೆಯ ಗೊಂದಲದ ಮಧ್ಯೆಯೂ ಹಾಸ್ಯವನ್ನು ಲೇಪಿಸಿರುವ ಪರಿಯನ್ನು ಕಾಣಬಹುದು. ತೇಜಸ್ವಿ ತಮ್ಮೆಲ್ಲ ಕ್ರಿಯಾಶೀಲ ಪ್ರಯೋಗಗಳಿಗೆ ಕನ್ನಡವನ್ನು ಕೇಂದ್ರವಾಗಿಟ್ಟುಕೊಂಡಿರುವುದು. ಕನ್ನಡ ಭಾಷೆ ಮತ್ತು ಅನುಭವ ಮತ್ತು ತಿಳುವಳಿಕೆಗಳ ವಿಕಾಸದ ದೃಷ್ಟಿಯಿಂದ ತುಂಬಾ ಮೌಲಿಕವಾದ ಕನ್ನಡಿಗರೆಲ್ಲರೂ ಕೃತಘ್ನರಾಗಿರಬೇಕಾದ ವಿಷಯ ಕನ್ನಡದಲ್ಲಿ ಏನೂ ಇಲ್ಲ ಇರುವುದೆಲ್ಲ ಬೂಸಾ ಎನ್ನುವವರು ಕನ್ನಡದಲ್ಲಿ ಸರ್ವಸಮಸ್ತವು ಇದೆ ಎನ್ನುವವರು ಕೊಂಚ ವಿವೇಕ ತೋರಿ ಮೌನ ವಹಿಸಿದರೆ ನಮ್ಮ ಮುಂದಿರುವ ಅಗಾಧ ರಚನಾತ್ಮಕ ಜವಾಬ್ದಾರಿಗಳನ್ನು ನಿರ್ವಹಿಸಲು ತುಂಬಾ ಅನುಕೂಲವಾಗುತ್ತದೆ. ಇವರ 'ಅವನತಿ' ಕತೆಯೂ ಗೌರಿ ಸೌಂದರ್ಯಕ್ಕೆ ಬರೆ ಇಡುವವರಿಗೆ ಹೋಗುವ ಕಣ್ಣುಗಳನ್ನು ಪಡೆದ ಸಮಾಜದ ಅವನತಿ ಒಂದು ಕಡೆ,

ಬರೆ ಇಡುವ ಕ್ರಿಯೆಯವರೆಗೆ ಪತಿತನಾಗಿರುವ ಸೂರ್ಯಾಚಾರ್ಯ ಬದುಕಿನ ದುರಂತ ಮತ್ತೊಂದುಕಡೆ. ಇವರೆಡು ಮನಮುಟ್ಟುವಂತೆ ಈ ಕತೆಯಲ್ಲಿ ಮೂಡಿಬಂದಿದೆ.

ಈರೇಗೌಡ ಸುಬ್ಬಯ್ಯನಿಗೆ ಮಕ್ಕಳಾಗಲಿಲ್ಲವೆಂದು ಆಡಿಕೊಂಡು ನಗಬೇಕಾದ ಸುಬ್ಬಯ್ಯ ಹೇಳುವ ಮಾತುಗಳು ಕೋಪದ ಜೊತೆ ಗಂಭೀರ ಹಾಸ್ಯದ ಒಡಪನ್ನು ಓದುಗರಿಗೆ ತೆರದಿಡುತ್ತದೆ.

"ಸುಬ್ಬಯ್ಯನಿಗೇನು ಮಕ್ಕಳ ಯೋಗ ಇಲ್ಲ ಅಂತಾ ಕಾಣ್ತದೆ. ಮೂರ್‍ನಾಲ್ಕು ಮಕ್ಕಳಾದವು ಆದರೇನು? ಆದವು ಹೋದಾವು ಸುಬ್ಬಯ್ಯನಾಗ ಏನಾದರೂ ಒಳರೋಗ ದೋಸಾಉಂಟಾ? ಎಂದು ಈರೇಗೌಡ ಹೇಳಿದ. ಹೀಗೆಂದು ಈರೇಗೌಡ ನಾಲ್ಕಾರು ಕಡೆ ಮಾತಾಡಿದ್ದ. ಇದು ಸುಬ್ಬಯ್ಯನ ಕಿವಿವರೆಗೂ ಹೋಗಿತ್ತು. ಅದನ್ನು ಕೇಳಿ ಅವನ ಕಿವಿ ತಲುಪಿಸಿದವನ ಬಳಿ ಸುಬ್ಬಯ್ಯ. "ಅವನ ಹೆಂಡ್ತಿ ಕಳಸಲಿ, ತೋರಿಸ್ತಿನಿ ದೋಸ ಎಂದು ಹೇಳಿಕೊಂಡು ನಕ್ಕಿದ್ದ ಮತ್ತು ಹಲ್ಲು ಕಡಿದ್ದಿದ್ದ."

ತೇಜಸ್ವಿಯವರು ಮಲೆನಾಡಿನ ಕನ್ನಡದ ಭಾಷೆಯಲ್ಲಿ ಅದರ ಎಲ್ಲ ಒರಟುತನದ ಜೊತೆ ಭಾಷೆಯನ್ನು ದುಡಿಸಿಕೊಂಡಿದ್ದಾರೆ. ಆದ್ದರಿಂದ ಅವರು ಎಂಥಾ ಸನ್ನಿವೇಶದಲ್ಲೂ ಹಾಸ್ಯವನ್ನು ತರಬಲ್ಲರು. ಆದರೆ ಅವರು ಹಾಸ್ಯವನ್ನು ತರುವಂತಹ ಭಾಷೆ ವಿಶಿಷ್ಟ. ಅವರ 'ತಬರನಕತೆ'ಯಲ್ಲಿ ಬರುವ ಪಡುಗೆರೆಯ ತಬರಶೆಟ್ಟಿ. ಬ್ರಿಟಿಷ್‌ರ ಕಾಲದಲ್ಲಿ ನೌಕರಿಗೆ ಸೇರಿ ಸ್ವಾತ್ರೋತ್ತರ ಭಾರತದಲ್ಲಿ ನಿವೃತ್ತನಾಗುತ್ತಾನೆ. ನಾಲ್ಕನೇಯ ದರ್ಜೆಯ ನೌಕರನಾಗಿ ವಿವಿಧ ಇಲಾಖೆಗಳಲ್ಲಿ ಸೇವೆ ಮಾಡಿದ ಈತನಿಗೆ ಪೆನ್ಷನ್ ಹಣ ದೊರಕುವುದಿಲ್ಲ. ತನ್ನ ಹೆಂಡತಿಗೆ ಗ್ಯಾಂಗ್ರಿನ್ ಶೂಶ್ರೂಷೆ ಮಾಡಿಸಲಾಗಿದೆ. ಮತಿಭ್ರಷ್ಟನಾದ ತಬರನ ನೋವಿನ ಕತೆ ಇಲ್ಲಿ ಅನಾವರಣಗೊಂಡಿದೆ. ಅವನನ್ನು ಕಂಡಾಗ ಮಾನವನನ್ನು ಮಾನವೀಯತೆಯನ್ನು ಕರಕರ ಜಿಗಿದು ಅಗಿದು ಉಗಿಯುತ್ತಾ ಇರುವ ಸೈತಾನನ ವ್ಯೂಹ ಕಾಣಸಿಗುತ್ತದೆ. ತಬರನಿಗೆ ಹುಚ್ಚು ಹಿಡಿದಾಗ ತೇಜಸ್ವಿಯವರು ಬಳಸುವ ಭಾಷೆ ಮೇಲ್ನೋಟಕ್ಕೆ ಹಾಸ್ಯ ಕಂಡರೂ ಅದರ ಹಿಂದಿರುವ ತಬರನ ದುರಂತಕಥೆಯನ್ನು ಓದುಗನಿಗೆ ಕಟ್ಟಿಕೊಡುತ್ತದೆ.

"ಸ್ವಾತಂತ್ರೋದಯದ ಬೆಳ್ಳಿ ಹಬ್ಬದ ಸಮಯದಲ್ಲಿಯೇ ತಬರನಿಗೆ ಹುಚ್ಚು ಹಿಡಿದಿದ್ದು ಕೇವಲ ಒಂದು ಆಕಸ್ಮಿಕ. ಎಲ್ಲರೂ ಭಾರತದ ಸ್ವಾತಂತ್ರವನ್ನು ಹೊಗಳಿ, ಭಾಷಣ ಬಿಗಿಯುತ್ತಿದ್ದಾಗ, ತಬರ ಬ್ರಿಟಿಷರ ಆಳ್ವಿಕೆ ಹೊಗಳುತ್ತಿದ್ದನಂತೆ. ಎಲ್ಲ ಅವನ ಹುಚ್ಚನ್ನು ನೋಡಿ ನಕ್ಕರು.

ಇಲ್ಲಿ ನಕ್ಕವರು ಹುಚ್ಚರು ಎಂದೂ ಹೇಳುವಲ್ಲಿ ತೇಜಸ್ವಿಯವರ ಭಾಷಾನೈಪುಣ್ಯತೆ ಅಡಗಿದೆ ಎಂದು ಹೇಳಬಹುದು. ಹಾಗೆಯೇ ಅವರು 'ಕಾಳಪ್ಪನಕೋಬ್ರ' ಎಂಬ ಕತೆಯಲ್ಲಿ ಹಾವು ಕೋಬ್ರ ಎಂದು ಬದಲಾದ ಸನ್ನಿವೇಶವನ್ನು ಹಾಸ್ಯದ ಲೇಪನ ಮಾಡಿ ಲೇವಡಿ ಮಾಡುವ ಅವರ ಭಾಷಾ ವೈಖರಿಯನ್ನು ಕಾಣಬಹುದು.

"ಮನುಷ್ಯರಿಗೆ ಹೊಸವಿಲಕ್ಷಣ ಪದಗಳ ಬಗ್ಗೆ ವಿಚಿತ್ರ ವ್ಯಾಮೋಹ ಇರುತ್ತೆ. ಸರ್ಪ, ನಾಗರಹಾವು ಎಂದೆಲ್ಲ ಹಾವನ್ನು ಕರೆಯುತ್ತಿದ್ದ ಬಹುಪಾಲು ಹಳ್ಳಿಗರು ಕಾಳಪ್ಪನ ದೆಸೆಯಿಂದ ಹಾವಿಗೆ

ಕೋಬ್ರ ಎಂದು ಕರೆಯಲು ಶುರುಮಾಡಿದರು. ನಾಗರಪೂಜೆ, ಕೋಬ್ರಪೂಜೆಯಾಯಿತು, ನಾಗರಕಲ್ಲು ಕೋಬ್ರಕಲ್ಲಾಯಿತು" ಎಂದು ಹೇಳುವಾಗ ಮುಗ್ಧ ಹಳ್ಳಿಯ ಜನರ ಭಾಷೆಯ ಬದಲಾವಣೆ ಹಾಸ್ಯಮಯವಾಗುವ ರೀತಿಯನ್ನು ಇವರು ನಿರೂಪಿಸುವ ಬಗೆ ವಿಶಿಷ್ಟವಾದುದು. ತೇಜಸ್ವಿಯವರು ಪಾತ್ರಗಳ ವರ್ಣನೆ ಮಾಡುವಾಗಲೂ ಅಷ್ಟೇ ಸರಳವಾಗಿಯೇ ಓದುಗರಿಗೆ ಹಾಸ್ಯದ ಮುಖಾಂತರ ಅವರ ಚಿತ್ರ ಮನದಲ್ಲಿ ಮೂಡುತ್ತಿತ್ತು. ಉದಾಹರಣೆಗೆ ಅವರ 'ಮಾಸ್ತಿ ಮತ್ತು ಭೈರ' ಎಂಬ ಕತೆಯಲ್ಲಿ ಮಾಸ್ತಿಯನ್ನು ಪರಿಚಯಿಸುವಾಗ "ನಾನು ಗುಡ್ಡಗಾಡಿನ ಜನರನ್ನು ಕಂಡು ಜನರನ್ನು ಬಹಳಷ್ಟು ನೋಡಿದ್ದೇನೆ. ಅವರೆಲ್ಲ ನಮಗಿಂತ ಕೊಂಚ ಬೇರೆಯಾಗಿಯೇ ಕಾಣುತ್ತಿದ್ದರೆ ಹೊರತು ಮಾಸ್ತಿ ಥರ ವಾನರಕೃತಿಗೆ ಹತ್ತಿರವಾಗುತ್ತಿರಲಿಲ್ಲ. ಇವನ ಮುಖ ಸಹ ಶಿಲಾಯುಗದವರಂತೆಯೇ ಕಾಣುತ್ತಿತ್ತು. ಆದರೂ ಅವನು ಕನ್ನಡಭಾಷೆ ಮಾತಾನಾಡಿದ ಮೇಲೆ ಎಲ್ಲಾ ನಾಗರೀಕರಂತೆ ಒಂದು ಹೆಸರನ್ನು ಇಟ್ಟುಕೊಂಡ ಮೇಲೆ ಅವನನ್ನು ಶ್ರೀಸಾಮಾನ್ಯರ ವಿಶೇಷ ರೂಪ ಎನ್ನದೇ ವಿಧಿಯಿರಲಿಲ್ಲ"

ಹೀಗೆ ಹೊರಡುವ ಅವರ ಭಾಷಾವೈಖರಿ ಆ ವ್ಯಕ್ತಿಯನ್ನು ತಮ್ಮ ನವಿರಾದ ಸರಳ ಭಾಷೆಯ ಮೂಲಕ ಅವನ ರೂಪವನ್ನು ನಮಗೆ ಕಟ್ಟಿಕೊಡುವುದಲ್ಲದೆ ಲೇವಡಿ ಮಾಡುವ ಅವರ ಭಾಷೆ ಓದುಗರಲ್ಲಿ ಅಚ್ಚಳಿಯದೇ ನಿಲ್ಲುತ್ತದೆ. ಯಾವುದೇ ಲೇಖಕನ ಮೊದಲ ಘಟ್ಟದ ಸಾಹಿತ್ಯ ರಚನೆಯೂ ಭಾಷೆಯನ್ನೂ ಎಚ್ಚರವಾಗಿ ಬಳಸುವ ಕಡೆಗೆ ಇರುತ್ತದೆ ಎಂದರೆ ತಪ್ಪಾಗಲಾರದು. ಭಾಷೆ ಎನ್ನುವುದು ಅನುಭವಗಳನ್ನು ಯಾವುದೇ ಚೌಕಾಸಿ ಮಾಡದೇ ಪರಿಪೂರ್ಣವಾಗಿ ಕಟ್ಟಿಕೊಟ್ಟಾಗ ಆ ಕಲಾಕೃತಿ ಯಶಸ್ವಿಯಾಗುತ್ತದೆ. ತೇಜಸ್ವಿಯವರ ಎರಡನೆಯ ಘಟ್ಟದ ಸಾಹಿತ್ಯ ರಚನೆಯಲ್ಲಿ ಹೊಸದಿಂಗತದೆಡೆಗೆ ಸಾಗುವ ಹಂಬಲದಲ್ಲಿ ಭಾಷಿಕವಾಗಿಯೂ ಬದಲಾವಣೆಯಾದದ್ದು ವಿಶೇಷ. ಮೊದಲನೆ ಘಟ್ಟದ ಸಾಹಿತ್ಯದಲ್ಲಿ ಲಿಂಗಬಂದ ಸ್ವರೂಪ ಈ ಕೃತಿಗಳಲ್ಲಿ ನಿರೂಪಣೆಗೆ ಹೆಚ್ಚಿನ ಮಹತ್ವ ಕೊಡಲಾಗುತ್ತಿತ್ತು. ಎರಡನೆ ಘಟ್ಟದ ಬರವಣಿಗೆಯಲ್ಲಿ ಭಾಷೆಯ ಎಡರಿಲ್ಲದೆ ನಿರರ್ಗಳವಾಗಿ ಸಾಗಿದೆ. ಎರಡನೆಯ ಘಟ್ಟದ ಬರವಣಿಗೆಯಲ್ಲಿ ವಿಶೇಷತೆ ಇದ್ದು 'ಅಬಚೂರಿನ ಪೋಸ್ಟಾಫೀಸ್' ಕಥಾ ಸಂಕಲನದಲ್ಲಿ ವಿಶಿಷ್ಟವಾದ ಭಾಷಾಪ್ರಯೋಗ ಮಾಡಿದ್ದಾರೆ.

ಇಲ್ಲಿ ಭಾಷೆಯೂ ಬಿಗಿಬಂಧದಿಂದ ಸಡಿಲಗೊಂಡು ಸರಾಗವಾಗಿ ಮೂಡಿಬಂದಿದೆ. "ತೇಜಸ್ವಿಯವರ ಬರವಣಿಗೆಯ ಸ್ವರೂಪ, ಸರಳ ನೈತಿಕ ನೆಲೆಗಳಲ್ಲಿ ತೀರ್ಪುಕೊಡುವ ದಾರ್ಷ್ಟ್ಯದ್ದಲ್ಲ. ತಮ್ಮ ಸುತ್ತಲಿನ ಪರಿಸರಕ್ಕೆ ಇಂದ್ರಿಯಗಳನ್ನು ತೆರೆದುಕೊಂಡು ಅದರ ರಹಸ್ಯವನ್ನು ಅದು ಬಿಟ್ಟು ಕೊಟ್ಟಷ್ಟು ಭಾಷೆಯಲ್ಲಿ ಒಳಗೊಳ್ಳುವಂತಹದ್ದು. ಗಾಢವಾದ ರಾಜಕೀಯ ಪ್ರಜ್ಞೆ, ಸಾಮಾಜಿಕ ಎಚ್ಚರ, ಸಾಂಸ್ಕೃತಿಕ ಕಾಳಜಿ ಇಟ್ಟುಕೊಂಡು ಬರೆಯುವಾಗಲೂ ತೇಜಸ್ವಿಯವರು ಸಾಕ್ಷಿಪ್ರಜ್ಞೆಯನ್ನು ಶುದ್ಧವಾಗಿಟ್ಟುಕೊಳ್ಳುವ ಪ್ರಬುದ್ಧರು. ಅವರು ನಿಲುವುಗಳನ್ನು ತೆಗೆದುಕೊಳ್ಳುವುದಿಲ್ಲವೆಂದಲ್ಲ. ಆದರೆ ಅವುಗಳನ್ನು ಕಪ್ಪು-ಬಿಳುಪು

ವರ್ಗೀಕರಣ ಮಾಡಿಕೊಳ್ಳುವುದಿಲ್ಲ ಅಷ್ಟೇ" ಎನ್ನುವ ಟಿ.ಪಿ.ಅಶೋಕರವರ ಮಾತುಗಳು ಇಲ್ಲಿ ಉಲ್ಲೇಖನೀಯ.

ತೇಜಸ್ವಿಯವರು ಭಾರತಿಯ ಸಮಾಜದ ಗಂಭೀರ ಸಮಸ್ಯೆಗಳನ್ನು ನವಿರು ಹಾಸ್ಯದಿಂದ ಕೂಡಿದ ಭಾಷೆಯಿಂದ ವ್ಯಕ್ತಪಡಿಸಿದ್ದಾರೆ. ಇಂತಹ ಹಾಸ್ಯಮಿಶ್ರಿತ ಭಾಷೆಯನ್ನೇ ಒಳಗೊಂಡಿರುವ ಚಿಂತನೆಗಳನ್ನು ಓದುಗರು ಅರ್ಥೈಸಿಕೊಂಡು ಸ್ಪಂದಿಸುವ ತುರ್ತು ಇಂದು ಎದುರಾಗಿದೆ.

**೬.೩ ಹಾಸ್ಯದ ಜೊತೆ ವೈಚಾರಿಕತೆ:-**

ಸ್ವಾತಂತ್ರ್ಯ ನಂತರದ ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ನಿರಂತರವಾಗಿ ಪ್ರತಿಕ್ರಿಯಿಸಿದ ಲೇಖಕರೊಬ್ಬರ ವೈಚಾರಿಕ ನೆಲೆಗಳನ್ನು ಒಂದೆಡೆಗೆ ಸಂಗ್ರಹಿಸಿ ಅಧ್ಯಯನಕ್ಕೆ ಗುರಿಪಡಿಸುವುದು ಅತ್ಯಂತ ಕಷ್ಟದ ಕೆಲಸ. ತೇಜಸ್ವಿ ಸುಮಾರು ೪೫ ವರ್ಷಗಳಿಂದಲೂ ಬರವಣಿಗೆಯನ್ನು ಮಾಡುತ್ತಲೇ ಬಂದವರು. ಅವರ ಬರವಣಿಗೆ ಕಥೆ, ಕವನ, ನಾಟಕ, ಕಾದಂಬರಿ, ವೈಜ್ಞಾನಿಕ ಕೃತಿಗಳು, ಪ್ರವಾಸಕಥನ, ಆತ್ಮಕಥೆ– ಹೀಗೆ ಹತ್ತು ಹಲವು ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡಿದೆ. ಈ ಅಭಿವ್ಯಕ್ತಿಗಳಲ್ಲಿ ಸ್ವಾತಂತ್ರ್ಯ ನಂತರದ ಸಮಾಜ, ರಾಜಕೀಯ, ಧಾರ್ಮಿಕ, ಪರಿಸರ, ವಿಜ್ಞಾನ, ಶಿಕ್ಷಣ, ಅಭಿವೃದ್ಧಿಯಂತಹ ಪರಿಕಲ್ಪನೆಗಳ ಬಗೆಗೆ ತಾವು ತಾಳಿರುವ ವೈಚಾರಿಕ ನಿಲುವುಗಳನ್ನು ಪ್ರಕಟಿಸಿದ್ದಾರೆ.

ತೇಜಸ್ವಿಯವರು ಬರೆಯಲಾರಂಭಿಸಿದಾಗಿನಿಂದ ಇದುವರೆಗಿನ ಅವರ ವೈಚಾರಿಕ ನಿಲುವುಗಳಲ್ಲಿ ಪರಸ್ಪರ ಬದಲಾವಣೆ, ವಿರೋಧಾಭಾಸಗಳನ್ನು ಕಾಣುತ್ತೇವೆ. ಈ ಗೊಂದಲ ಕೇವಲ ತೇಜಸ್ವಿಯಂತಹ ಲೇಖಕರೊಬ್ಬರ ಸಮಸ್ಯೆಯಾಗಿರದೆ ದೀರ್ಘಕಾಲ ಸಾಮಾಜಿಕ ಸ್ಥಿತ್ಯಂತರಗಳಿಗೆ ನಿರಂತರವಾಗಿ ಪ್ರತಿಕ್ರಿಯಿಸವು ಯಾವೊಬ್ಬ ಸಂವೇದನಾಶೀಲ ಲೇಖಕನಿಗೂ ತಪ್ಪಿದ್ದಲ್ಲವೆಂದು ತಿಳಿಯಬಹುದು. ಹಾಗೆಯೇ ಇಂಥ ಲೇಖಕರು ತಮ್ಮ ಸಾಹಿತ್ಯ ರಚನೆಯ ಮೇಲೆ ಗಾಢವಾಗಿ ಬೀರಿದ ಪ್ರಭಾವ ಪರಿಣಾಮಗಳನ್ನು ತಾವೇ ಪ್ರಕಟಿಸಿದ್ದರು. ಅವುಗಳನ್ನು ಮೀರಿದ ಅನನ್ಯವಾದ ಅರ್ಥ. ಧ್ವನಿ ಹಾಗೂ ದ್ವಂದ್ವಗಳಿಗೆ ಇಂಥ ಲೇಖಕರ ಕೃತಿಗಳು ಮೈ ಪಡೆಯುವುದು ಸಹಜವೇ ಆಗುತ್ತದೆ. ತೇಜಸ್ವಿಯವರು ನವ್ಯಸಾಹಿತ್ಯದ ಸಾಂಕೇತಿಕ ಗೊಂದಲಗಳಿಂದ ಮುಕ್ತಿಪಡೆದು ಬದುಕಿನ ಪ್ರಯೋಗಶೀಲತೆಯ ಕಡೆಗೆ ತೇಜಸ್ವಿಯವರ ವೈಚಾರಿಕತೆ ಮುನ್ನಡೆದಿರುವುದನ್ನು 'ಹೊಸದಿಗಂತದೆಡೆಗೆ' ಅವರ ಸಂವೇದನೆ ಪಲ್ಲಟಗೊಳ್ಳುತ್ತಿರುವುದನ್ನು ಕಾಣುತ್ತೇವೆ.

"ಅಬಚೂರಿನ ಪೋಸ್ಟಾಫೀಸ್'ಕೃತಿಯ ಆರಂಭದಲ್ಲಿ ತೇಜಸ್ವಿಯವರು ತಮ್ಮ ಸಾಹಿತ್ಯ ಕೃತಿಗಳ ಹಿಂದಿನ ವೈಚಾರಿಕತೆ ಯಾವುದೆಂಬುದನ್ನು ಸ್ಪಷ್ಟವಾಗಿಯೇ ಘೋಷಿಸಿಕೊಂಡಿದ್ದಾರೆ. ಲೋಹಿಯಾರ ತತ್ವ ಚಿಂತನೆ, ಕುವೆಂಪು ರವರ ಕಲಾಸೃಷ್ಟಿ, ಕಾರಂತರ ದೃಷ್ಟಿ ಮತ್ತು ಅವರ ಬದುಕಿನಲ್ಲಿನ ಪ್ರಯೋಗಶೀಲತೆ ಈ ಮೂರೇ ಅವರ ಸಾಹಿತ್ಯ ರಚನೆಯ ಮೇಲೆ ಗಾಢ ಪರಿಣಾಮ

ಬೀರಿದವುಗಳಂತಲೂ ಮುಂಬರುವ ಕನ್ನಡ ಸಾಹಿತ್ಯಸೃಷ್ಟಿಯಲ್ಲಿ ಈ ಮೂರೇ ಚೈತನ್ಯಶಕ್ತಿಯಾಗಬಲ್ಲವು ಎಂಬ ಧೋರಣೆಯನ್ನು ತಾಳುತ್ತಾರೆ. ಇಂತಹ ವೈಚಾರಿಕ ನಿಲುವುಗಳನ್ನು ತೇಜಸ್ವಿಯವರು ತಮ್ಮ ಹಾಸ್ಯ ಭಾಷಾವೈಖರಿಯಿಂದ ಹೇಳಿರುವುದು ಅವರ ನಿರೂಪಣಾತಂತ್ರದ ಜಾಣ್ಮೆ ಎಂದೇ ಹೇಳಬೇಕು. ಅವರ 'ಎಂಗ್ಟನ ಪುಂಗಿ' ಎಂಬ ಕಥೆಯಲ್ಲಿ ಸ್ಥಳೀಯ ನಂಬಿಕೆ ಮತ್ತು ಆಧುನಿಕ ಪಾಶ್ಚಾತ್ಯ ವಿದ್ಯಾಭ್ಯಾಸ ಕಲಿಸಿದ ರ್‍ಯಾಶನಲಿಸ್ಟ ವಿಚಾರಧಾರೆಗಳ ಮುಖಾಮುಖಿಯಾಗುವುದನ್ನು ನಾವು ಕಾಣಬಹುದಾಗಿದೆ. ನಮ್ಮೊಳಗೆ ಇರುವ ನಮ್ಮ ಸಾಂಸ್ಕೃತಿಕ ಸ್ಮೃತಿಗಳ ಭಾವಲೋಕ ಮತ್ತು ನಾವು ನಮ್ಮ ಆಧುನಿಕ ವಿದ್ಯಾಭ್ಯಾಸದಿಂದ ರೂಪಿಸಿಕೊಂಡ ಸಂದೇಹವಾದಿ ಬೌದ್ಧಿಕತೆ ಇವುಗಳ ಸಂಘರ್ಷ ಈ ಕಾಲದ ಅಕ್ಷರಸ್ಥ ಭಾರತೀಯರ ಅವಸ್ಥೆಯಷ್ಟೇ.

ಈ ಅವಸ್ಥೆಯನ್ನು ವೈಯಕ್ತಿಕ ಮಾನವೀಯ ನೆಲೆಯಲ್ಲೂ ಸಾಮಾಜಿಕ ಸ್ಥಿತಿಯಲ್ಲೂ ಏಕತ್ರ ಗ್ರಹಿಸುವ ಮಹತ್ವಾಕಾಂಕ್ಷೆ 'ಎಂಗ್ಟನಪುಂಗಿ'ಯಲ್ಲಿ ಕಾಣುತ್ತದೆ. ಪುಂಗಿ ಊದಿ ಹಾವು ಹಿಡಿಯುತ್ತೇನೆ ಎನ್ನುವ ಗೊಲ್ಲರ ಎಂಗ್ಟ ಮತ್ತು ಇದನ್ನು ನಂಬದ ಇದೆಲ್ಲ ಡೊಂಗಿ ಎಂದು ಖಚಿತವಾಗಿ ನಡೆದಿರುವ ಸಂಶೋಧನಾ ಕೇಂದ್ರದ ವಿಜ್ಞಾನಿಗಳ ಗುಂಪು ಎರಡೂ ತದ್ವಿರುದ್ಧ ಬಿಂದುಗಳಲ್ಲಿ ಇದ್ದಾರೆ. ಈ ಕತೆಯ ನಿರೂಪಕನೂ ಮೊದಲು ಎರಡನೇ ಗುಂಪಿಗೆ ಸೇರಿದವನೇ ಆಗಿರುತ್ತಾನೆ. ಕ್ರಮೇಣ ನಿರೂಪಕನ ಖಚಿತ ತರ್ಕ ಸಡಿಲವಾಗುತ್ತ ಎಂಗ್ಟನ ಬಗ್ಗೆ ಹೆಚ್ಚಿನ ಕುತೂಹಲ ಆಶ್ಚರ್ಯ ಮೊಳೆಯಲಾರಂಭಿಸುತ್ತದೆ. ಎಂಗ್ಟನ ಕಸುಬು ಒಂದು ಚಮತ್ಕಾರವೇ? ಪವಾಡವೇ? ತಾತ್ಕಾಲಿಕ ಮತಿಭ್ರಮಣೆ ಮಾಡುವ ಕಣ್ಕಟ್ಟೆ? ಮುಂತಾಗಿ ಆಶ್ಚರ್ಯ ಅನುಮಾನಗಳ ಅಲೆಗಳೇ ಏಳಲಾರಂಭಿಸುತ್ತದೆ. ನಿರೂಪಕನ ವಿಜ್ಞಾನಿ ಮಿತ್ರರು ತಮ್ಮ ಮಿತ್ರ ಮತಾಂತರ ಹೊಂದಿದವನು ಎಂಬಂತೆ ಟೀಕಿಸಲಾರಂಭಿಸುತ್ತಾರೆ. ಎಂಗ್ಟನ ನಿರೂಪಕನನ್ನು ಪರಿವರ್ತನೆ ಮಾಡಿದ ಮೂಢನಂಬಿಕೆಗಳ ವಕ್ತಾರನಾಗಿ ಕಾಣಿಸಿಕೊಳ್ಳಲಾರಂಭಿಸುತ್ತಾನೆ.

ಎಂಗ್ಟನ ವಿದ್ಯೆಯ ಸತ್ಯಾಸತ್ಯತೆಗಳನ್ನು ಪರೀಕ್ಷಿಸಲು ನಿರೂಪಕ ಹಲವು ಪ್ರಯತ್ನಗಳನ್ನು ಮಾಡುತ್ತಾನೆ. ಎಂಗ್ಟನನ್ನೂ ಚರ್ಚೆಗೆ ಎಳೆಯುತ್ತಾನೆ. ತನಗೆ ಮಂಕುಬೂದಿ ಎರಚಿ ಎಂಗ್ಟ ಮೋಸ ಮಾಡಿರಬಹುದೇ ಎಂದು ತಬ್ಬಿಬ್ಬಾಗುವ ನಿರೂಪಕ ತನ್ನನ್ನೇ ಹಾಸ್ಯಕ್ಕೆ ಗುರಿ ಮಾಡಿಕೊಳ್ಳುತ್ತಾನೆ. ಹಾಗೆಯೇ ತಮ್ಮ ವೈಚಾರಿಕ ನಿಲುವುಗಳನ್ನು ಮಂಡಿಸಲು ಎಂಗ್ಟನ 'ಮೋಸ'ವನ್ನು ಬಯಲಿಗೆಳೆಯುವ ಹಲವು ಉಪಾಯಗಳನ್ನು ಯೋಚಿಸುತ್ತಾನೆ. ನಿರೂಪಕನ ಸಂದೇಹ ಅನುಮಾನಗಳಿಂದ ಎಂಗ್ಟ ಕೊಂಚವು ವಿಚಲಿತನಾಗುವುದಿಲ್ಲ.

"ಬಹುಶಃ ಎಷ್ಟೋ ಜನಗಳು ಎಷ್ಟೋ ಸಾರಿ ಅವನಿಗೆ ನಿನ್ನಂತೆ ಬಯ್ದಿರಬಹುದು. ಜೊತೆಗೆ ಇದೆ ಅವನ ಹೊಟ್ಟೆ ಪಾಡಾದುದರಿಂದ ಅವನು ತಾಳ್ಮೆ ಕಳೆದುಕೊಳ್ಳುವಂತೆಯೂ ಇರಲಿಲ್ಲ. ತನ್ನ ಕೊಳೆಯಾದ ಕೊಳಕು ಕೋಟಿನ ಜೇಬಿನಿಂದ ಯಾರ್‍ಯಾರದೋ ಸರ್ಟಿಫೀಕೆಟ್ಟುಗಳನ್ನು ತೆಗೆದು ಎಂತೆಂಥ ಘಟ ಸರ್ಪಗಳನ್ನೆಲ್ಲಾ ಹಿಡಿದು ತಾನು ಅವರ ಬಳಿ ಇನಾಮು ತೆಗೆದುಕೊಂಡಿದ್ದೇನೆಂದು ವಿವರಿಸಿದ"

ಇಲ್ಲಿ ನಿರೂಪಕರು ಎಂಗ್ಟನ ಪಾತ್ರವನ್ನು ಕಟ್ಟಿಕೊಡುವುದರ ಮೂಲಕ ತಮ್ಮದೇ ಆದ ವೈಚಾರಿಕ ನಿಲುವುಗಳನ್ನು ಓದುಗರ ಮುಂದಿಡುತ್ತಾರೆ.

"ಅವತ್ತು ಎಂಗ್ಟ ಪುಂಗಿ ಊದಿ ಹಲವಾರು ಹಾವುಗಳನ್ನು ನಮ್ಮ ಮನೆಯ ಪಕ್ಕದಲ್ಲೇ ಹಿಡಿದು ಬಿಟ್ಟೆ, ಕಟ್ಟುಹಾವು, ನಾಗರಹಾವು, ಕೊಳಕುಮಂಡಲ ಇತ್ಯಾದಿ ನಾಲ್ಕಾರು ಬಗೆಯ ಹಾವುಗಳನ್ನು ಹಿಡಿದು ಹಲ್ಲು ಮುರಿದು ಬುಟ್ಟಿಗೆ ತುಂಬಿಕೊಂಡ. ಮನೆಯ ಪಕ್ಕದಲ್ಲೇ ತರಗೆಲೆಗಳ ಅಡಿಯಿಂದ ಹೂವಿನ ಕುಂಡಗಳ ಪಕ್ಕದಿಂದ ಅವನು ಹಾವನ್ನು ಬಾಲ ಹಿಡಿದು ಈಚೆಗೆ ಎಳೆದಿದ್ದನ್ನು ನೋಡಿ ನಾನು ಕಂಗಾಲಾಗಿ ಹೋದೆ ಎಂಥ ಅಪಾಯಕರ ಸನ್ನಿವೇಶದಲ್ಲಿ ಬದುಕುತ್ತಿರುವನೆಂದು ಚಿಂತಿಸಿ ಅವನಿಗೆ ಆಗಾಗ ಬಂದು ಇಲ್ಲಿರುವ ಹಾವುಗಳಷ್ಟನ್ನೂ ಹಿಡಿದು ಹಾಕು ಮಾರಾಯ ಎಂದು ಹೇಳಿದೆ. ನನ್ನ ಕಣ್ಣಿಗೆ ಒಂದು ದಿನವೂ ಕಾಣದಿದ್ದ ಈ ಭಯಂಕರ ವಿಷದ ಹಾವುಗಳು ಅಲ್ಲಿ ಹೇಗೆ ಅಡಗಿದ್ದವು ಎಂದು ಆಶ್ಚರ್ಯಪಟ್ಟೆ"

ಆದರೆ ಆಧುನಿಕ ಶಿಕ್ಷಣ ನಮ್ಮಲ್ಲಿ ಬಿತ್ತಿರುವ ಅಪನಂಬಿಕೆಗಳ ಹೊಸ ನಂಬಿಕೆಗಳ, ಸಂದೇಹಗಳ ಪ್ರಭಾವ ತೀರ ಗಾಢವಾದುದಷ್ಟೇ. ಈ ಸಂಶಯಗಳಿಂದಾಗಿ ನಮ್ಮ ನಂಬಿಕೆಗಳಿಗಿಂತ ಭಿನ್ನವಾದ ನಂಬಿಕೆಗಳನ್ನು ಮೌಲ್ಯಗಳನ್ನು, ವಿದ್ಯೆಗಳನ್ನು ಒಟ್ಟಾರೆ ಜೀವನ ಕ್ರಮಗಳನ್ನು ನಾವು ಸಮುದಾಯದಿಂದ ಗಮನಿಸುತ್ತಿಲ್ಲವೆ? ನಮ್ಮ ಜೀವನ ವಿಧಾನ ನಂಬಿಕೆಗಳಿಗೆ ಹೊರತಾದ ಪ್ರಪಂಚಗಳನ್ನು ವ್ಯಕ್ತಿಗಳನ್ನು ಅರ್ಥಮಾಡಿಕೊಳ್ಳದಷ್ಟು ಸಿನಿಕತನ, ಅಸಹನೆ, ಅಹಂಕಾರಗಳನ್ನು ಹೊಸ ನಾಗರಿಕತೆ ಕಲಿಸಿಬಿಟ್ಟಿದೆಯೆ ; ಎಂಬ ಪ್ರಶ್ನೆಗಳನ್ನು ತೇಜಸ್ವಿ ಕಥೆಗಳಲ್ಲಿ ವೈಚಾರಿಕ ನಿಲುವುಗಳು ಎತ್ತುತ್ತ ಹೋಗುತ್ತವೆ.

ಸಂಶೋಧನ ಕೇಂದ್ರದ ವಿಜ್ಞಾನಿಗಳಿಗೆ ಒಂದು ತರ್ಕವಿರುವ ಹಾಗೆ ಎಂಗ್ಟನಿಗೂ ತನ್ನದೇ ಆದ ತರ್ಕವಿರುವುದನ್ನು ನಿರೂಪಕ ಕಂಡುಕೊಳ್ಳುತ್ತಾನೆ. ಈ ಎರಡು ತರ್ಕಗಳ ಸ್ವರೂಪವೇ ಬೇರೆ ಬೇರೆಯಾದದ್ದು ವಿಜ್ಞಾನಿಗಳ ಪರಿಭಾಷೆಯೇ ಬೇರೆ. ಎಂಗ್ಟನ ಭಾಷೆಯೇ ಬೇರೆ ಎಂದು ನಮಗೆ ಹೊಳೆದಾಗ ತೇಜಸ್ವಿ ಕಥನ ಒಳಗೊಳ್ಳಲು ಪ್ರಯತ್ನಿಸುತ್ತಿರುವ ಬಹುತ್ವ ಪ್ರಜ್ಞೆ; ನಮ್ಮ ಅರಿವಿಗೆ ಬರಲಾರಂಭಿಸುತ್ತದೆ. ಮೊದ ಮೊದಲು ಕೇವಲ ವೀಕ್ಷಕನಾಗಿದ್ದ ನಿರೂಪಕ ಈಗ ಈ ಅರಿವಿನ ಪ್ರಕ್ರಿಯೆಗೆ ತನ್ನನ್ನು ಒಪ್ಪಿಕೊಂಡು, ತನ್ನನ್ನು ತನ್ನ ನಿರೂಪಣೆಯನ್ನು ಸಮಸ್ಯಾತ್ಮಕಗೊಳಿಸಿಕೊಳ್ಳುತ್ತಾನೆ. ತನ್ನನ್ನೂ ತನ್ನ ನಂಬಿಕೆಗಳನ್ನು ಒಪ್ಪಿಕೊಳ್ಳುವುದರ ಮೂಲಕ ತನ್ನ ಗರ್ವವನ್ನು ಶರತ್ವವನ್ನು ಗೆದ್ದುಕೊಳ್ಳುತ್ತಾನೆ.

ತೇಜಸ್ವಿ ಕಥೆಗಳ ಸಾಮಾಜಿಕ ಪಲ್ಲಟಗಳ 'ವೀಕ್ಷಣೆ' ಮಾತ್ರ ಆಗದೆ ನಿರೂಪಕರ ಅರಿವಿನ ವಿಕಾಸದ ಕಥನವು ಆಗಿದೆ. ಪರ–ವಿರೋಧಗಳ ಸರಳ ಆಯ್ಕೆಯ ವಿಧಾನವನ್ನು, ಕಲಾತ್ಮಕ ತಾಟಸ್ಥ್ಯದ ನೆಲೆಯನ್ನು ಬಿಟ್ಟುಕೊಟ್ಟು ಅನುಭವದಲ್ಲಿ ಪಾಲ್ಗೊಳ್ಳುವ ಮೂಲಕವೇ ಅರಿವನ್ನು ಹಿಗ್ಗಿಸಿಕೊಳ್ಳುವ

ಪಥವನ್ನು ಹಿಡಿಯುತ್ತದೆ. ನಿರೂಪಕರು ಕೇಳುವ ಪ್ರಶ್ನೆಗಳಿಗೆ ಎಂಗ್ಟ ಹೇಳುವ ಉತ್ತರಗಳು ಅವರ ಸಂಭಾಷಣೆ ನಮಗೆ ತಿಳಿಹಾಸ್ಯ ತರುತ್ತದೆ.

"ಅಲ್ಲಾ ಸ್ವಾಮಿ, ನಮ್ಮಂಗೆ ಕಿವಿಯಿಲ್ಲದಿದ್ದರೆ ಶಬ್ದ ಕೇಳಿಸೊಲ್ವ ಹಾವಿಗೆ? ಹಂಗಾರೆ ನಮ್ಮಂಗೆ ಕಾಲಿಲ್ಲ ಹಾವಿಗೆ, ಹಾಗಂತ ಓಡಾಡೋಕೆ ಬರೋದಿಲ್ವ ಹಾವಿಗೆ, ಅದೆಲ್ಲಾ ಆ ಸ್ವಾಮಿ ಮಾಡಿರೋ ವಿಚಿತ್ರ ಸ್ವಾಮಿ. ಇಷ್ಟೊಂದು ತಿಳಿದೊರು, ಓದಿದೋರು ಹಳ್ಳಿ ಜನಗಳ ಹಂಗೇ ಮಾತಾಡಿದರೆ ಹೇಗೆ ಸ್ವಾಮಿ"

'ನನ್ನ ವಿಜ್ಞಾನಿ ಮಿತ್ರರು ನನ್ನ ಬಳಿ ಎತ್ತಿದ್ದ ಸಂದೇಹಗಳಿಗೆಲ್ಲ ಚಟಪಟ ಕರಾರುವಕ್ಕಾಗಿ ತನ್ನದೇ ಆದ ರೀತಿಯಲ್ಲಿ ಎಂಗ್ಟ ಉತ್ತರ ಹೇಳಿತ್ತಿದ್ದ. ಒಟ್ಟಿನಲ್ಲಿ ಈ ವಿಜ್ಞಾನಿ ಮಿತ್ರರು ಮತ್ತು ಎಂಗ್ಟನ ನಡುವೆ ಸಿಕ್ಕಿಕೊಂಡು ಮೂಢನಾದವನು ನಾನು. ಇಬ್ಬರೂ ನನ್ನನ್ನು ಹಳ್ಳಿಯವರಂತೆ ಮಾತಾಡುತ್ತಿರಲ್ಲ ಎಂದು ಲೇವಡಿ ಮಾಡಿದ್ದರು. ಎಂಗ್ಟನ ಹತ್ತಿರ ವಾದ ಮಾಡಿ ತರ್ಕದಿಂದ ಸೋಲಿಸುವುದು ಸಾಧ್ಯವಿಲ್ಲ ಎನಿಸಿತು.

ಎಂಗ್ಟ ಪುಂಗಿ ಹೊರತೆಗೆದಾಗ ಅದನ್ನು ಯಾರು ಊದಿದರೂ ಬರ್ತವಾ? ಇಲ್ಲ ನೀನು ಊದಿದರೆ ಮಾತ್ರ ಬರೋದಾ? ಎಂದು ನಿರೂಪಕ ಕೇಳುತ್ತಾನೆ. ಅದಕ್ಕೆ ಎಂಗ್ಟ 'ಇದಕ್ಕ ಯಾರೂ ಊದಿದರೂ ಬರ್ತದೆ ಸ್ವಾಮಿ ಆದರೆ ಅದನ್ನು ಪತ್ತೆ ಮಾಡಿ ಹಿಡಿಯೋದಕ್ಕೆ ಭಲೇ ಚುರುಕು ಕಣ್ಣು ಬೇಕು.

ತೇಜಸ್ವಿ ಕಥೆಗಳಲ್ಲಿ ಪ್ರತಿಕ್ರಿಯಾತ್ಮಕ ನೆಲೆಗಳಿಂದ ಕ್ರಿಯಾತ್ಮಕ ನೆಲೆಗಳಿಗೆ ಚಲಿಸಿರುವಂತೆ ಓದಿನ ತಿಳುವಳಿಕೆಯೂ ಸತ್ಯ ಮತ್ತು ಅನುಭವ ಜನ್ಯಸತ್ವಗಳ ವ್ಯತ್ಯಾಸವು ನಮ್ಮ ಅರಿವಿಗೆ ಬರುತ್ತಾ ಹೋಗುತ್ತವೆ. ಈ ಕಥೆಯಲ್ಲಿ ತೇಜಸ್ವಿಯವರು ನಾವೆಷ್ಟೇ 'ಆಧುನಿಕ'ರಾಗಿದ್ದರೂ ನಮ್ಮೊಳಗಿನ ಸ್ಮೃತಿ ಲೋಕ ಸುಪ್ತವಾಗಿದ್ದು ಜೀವಂತವಾಗಿದೆ ಎಂಬುದನ್ನು 'ಎಂಗ್ಟನ ಪುಂಗಿ'ಯ ನಿರೂಪಕ ತನ್ನ ಸಹಜ ಲಘು ಹಾಸ್ಯದ ಧಾಟಿಯಲ್ಲಿ ಧ್ವನಿಸಿಬಿಡುತ್ತಾನೆ. ಎಂಗ್ಟನನ್ನು ಕೇವಲ ಒಬ್ಬ ವಿಶಿಷ್ಟ ವ್ಯಕ್ತಿ ಎಂದು ಚಿತ್ರಿಸದೇ ಜೀವನಕ್ರಮವೊಂದರ ಪ್ರತಿನಿಧಿಯೆಂದು ಪರಿಭಾವಿಸುವುದರಿಂದ ತೇಜಸ್ವಿಕಥನಕ್ಕೆ ತಾನಾಗಿ ಒಂದು ಸಾಂಸ್ಕೃತಿಕ ಮಹತ್ವ ಬಂದುಬಿಡುತ್ತದೆ. 'ಪರಿಸರದಕತೆ' ಸಂಕಲನದ ಇನ್ನೊಂದು ಮುಖ್ಯ ಕತೆಯೆಂದರೆ 'ಮೂಲಿಕೆ ಬಳ್ಳಿಯ ಸುತ್ತ' ಎಂಗ್ಟನ ಸಂತತಿ ಕ್ರಮೇಣ ಕಣ್ಮರೆಯಾಗುವ ವಿದ್ಯಾಮಾನವನ್ನು 'ಎಂಗ್ಟನ ಪುಂಗಿ' ಕತೆಯಲ್ಲಿ ಗಮನಿಸುವ ತೇಜಸ್ವಿ 'ಮೂಲಿಕೆಯ ಬಳ್ಳಿಯ ಸುತ್ತ' ಕತೆಯಲ್ಲಿ ಗಿಡಮೂಲಿಕೆಗಳ ಸುತ್ತ ಬೆಳೆದ ಭಾರತೀಯ ನಾಟಿವೈದ್ಯಪದ್ಧತಿಯ ಇಂದಿನ ಅವಸ್ಥೆಯನ್ನು ಕುರಿತು ಮಾರ್ಮಿಕವಾಗಿ ಚಿಂತಿಸಿದ್ದಾರೆ. ಸ್ಥಳೀಯ ಜ್ಞಾನಮಾರ್ಗಗಳು ವಿಸ್ಮೃತಿಯ ಅಂಚಿಗೆ ಸರಿಯಲು ಆಧುನಿಕ ಜ್ಞಾನಮಾರ್ಗಗಳ ದಾಳಿ ಮಾತ್ರ ಕಾರಣವಲ್ಲ ಎಂಬುದು ತೇಜಸ್ವಿಯವರ ಇಂಗಿತವೆಂದೇ ತೋರುತ್ತದೆ.

ಒಂದು ಜೀವನಕ್ರಮ ಬದಲಾದಂತೆ ಅದರ ಗ್ರಹಿಕೆಯ ಅಭಿವ್ಯಕ್ತಿಯ ಕ್ರಮಗಳು ಮುಂದಿನ ಪೀಳಿಗೆಯವರೆಗೆ ಅಭೇದ್ಯವೂ ಅನೂಹ್ಯವಾದ ಅದ್ದರಿಂದ ಪರಿಚಿತವು ಅಪ್ರಸ್ತುತವೂ ಆಗಿಬಿಡಬಹುದು. ಒಂದು ಪದ್ಧತಿ ಐತಿಹಾಸಿಕ ಕಾರಣಗಳಿಂದಾಗಿ ಇನ್ನೊಂದು ಅನ್ಯಪದ್ಧತಿಯಿಂದ ಸ್ಥಳಾಂತರಿಸಲ್ಪಟ್ಟಾಗ

ಸ್ಥಳೀಯವಾದದ್ದು ಸಂಪೂರ್ಣವಾಗಿ ಕಣ್ಮರೆಯಾಗಲುಬಹುದು. ಜ್ಞಾನಸಂಗ್ರಹ ಸಂಚಯಗಳ ಮಾರ್ಗ ಆ ಸಂಸ್ಕೃತಿಗಳ ಜಾಯಮಾನಗಳಿಗೆ, ನುಡಿಗಟ್ಟುಗಳಿಗೆ ಅಥವಾ ಅದನ್ನು ಪ್ರಾಕ್ಟಿಸ್ ಮಾಡುವವರ ವೈಯಕ್ತಿಕ ಮರ್ಜಿಗಳಿಗೆ ಬದ್ಧವಾಗಿ ಬಿಟ್ಟರೆ ಕಾಲ ಮುಂದುವರಿದಂತೆ ಅವುಗಳನ್ನು ಮರಳಿ ಪಡೆಯುವ ಪ್ರಯತ್ನಗಳು ಕ್ಲಿಷ್ಟವಾಗುತ್ತದೆ. ಪ್ರಾಚೀನವಾದದ್ದನ್ನು, ಸ್ಥಳೀಯವಾದದ್ದನ್ನು ಇಂದು ಮರಳಿ ಪಡೆಯುವ, ಪ್ರಸ್ತುತಗೊಳಿಸಿಕೊಳ್ಳುವ ಬಗೆ ಹೇಗೆ ಎಂಬುದು ಇಲ್ಲಿನ ವ್ಯಾಕುಲಕ್ಕೆ ಕಾರಣವಾಗಿದೆ.

ಲೇಖಕರು ಕಥೆಯ ಪ್ರಾರಂಭದಲ್ಲೆ ಹೇಳುವ ಮಾತುಗಳು ಅವರ ವೈಚಾರಿಕ ನಿಲುವುಗಳೇನು? ಅವರಲ್ಲಿರುವ ಶೋಧನಾ ಗುಣವನ್ನು ಓದುಗರ ಮುಂದಿಡುತ್ತದೆ. "ಇದೊಂದು ವಿಚಿತ್ರವಾದ ಔಷಧಿ ಬಳ್ಳಿಯ ಕತೆ. ಇದರ ಬಗ್ಗೆಯ ಸುಳ್ಳು-ನಿಜ ಕಲ್ಪನೆಯ ಕತೆಗಳು ಇವೆಲ್ಲವನ್ನೂ ಮೀರಿ ಈ ಬಳ್ಳಿಯ ಬಗ್ಗೆಯ ಸತ್ಯಾಂಶದ ಕೆಲವು ಪಾಲನ್ನು ತಿಳಿದುಕೊಳ್ಳಲು ನನಗೆ ಇಪ್ಪತ್ತು ವರ್ಷಗಳು ಹಿಡಿಯಿತೆಂದು ಹೇಳಿದರೆ ನಿಮಗೆ ಆಶ್ಚರ್ಯವಾಗಬಹುದು. ಆದರೂ ನಿಜ ಎಂಬುವ ನಿರೂಪಕರ ಮಾತಿನೊಂದಿಗೆ ಅವರ ವಿಚಾರಗಳು ಮಾರನ ಮೂಢನಂಬಿಕೆಗಳು ಕವಲೊಡೆಯುತ್ತಾ ಹೋಗುತ್ತದೆ. ಆದರೆ ಮಾರ ಕೊಡುವ ವಿವರಗಳಿಗೆ ಲೇಖಕರು ಕೊಡುವ ವಿವರಗಳು ಕಥೆಯ ಅಂತಿಮದಲ್ಲಿ ಒಂದು ತೀರ್ಮಾನಕ್ಕೆ ಬರುತ್ತದೆ.

ಒಮ್ಮೆ ಒಂದು ಬಳ್ಳಿಯ ಬೀಳನ್ನು ಕಂಡೊಡನೆ ಮಾರ ಅದನ್ನು ತೆಗೆದು ಲಘುಬಗೆಯಿಂದ ಪಕ್ಕದಲ್ಲಿದ್ದ ಚಿಕ್ಕ ಮರ ಒಂದಕ್ಕೆ ಸುತ್ತಿ ಕಟ್ಟಿಬಿಡುತ್ತಾನೆ ಏಕೆಂದು ನಿರೂಪಕ ಕೇಳಿದರೆ 'ಅಯ್ಯಾ ಆ ಬೀಳಿನ ವಿಚಾರ ನಿಮಗೆ ಗೊತ್ತಿಲ್ಲ. ಇದು ಬೇಕಾದಾಗ ಬೇಕಾದೋರಿಗೆ ಸಿಗಬಾರ್ದು ಅಂತ ಒಬ್ಬ ರುಸಿ ಶಾಪ ಇದೆ. ಬೇಕೂಂತ ಹುಡುಕಿದರೆ ತಲೆ ತಪ್ಪಿಸಿಕೊಂಡು ಬಿಡುತ್ತದೆ. ಪ್ರಾಣ ಹೋದರೂ ಸಿಕ್ಕೋದಿಲ್ಲ. ಅದಕ್ಕೆ ಕಣ್ಣಿಗೆ ಕಂಡಾಗ ಇದನ್ನು ಹಿಡಿದು ಯಾವುದಾದರೂ ಗಿಡಕ್ಕೆ ಕಟ್ಟಿಬಿಡಬೇಕು. ಬಿದ್ದಿರು ಅಲ್ಲಿ ಅಂತ" ಆಗ ನಿರೂಪಕರು ಈ ರೀತಿ ಪ್ರತಿಕ್ರಿಯಿಸುತ್ತಾರೆ.

'ವೀಳ್ಯದೆಲೆಯಂತೆ ಚಿಕ್ಕ ಎಲೆಗಳು, ದ್ರಾಕ್ಷಿಗೊಂಚಲಿನಂಥ ಗೊಂಚಲು ಕಾಯಿಗಳ ಬಳ್ಳಿ ಅದು. ಮಳೆ ಬಿದ್ದ ಕೂಡಲೇ ನೆಲದಿಂದೇಳುವ ಈ ಬೀಳು ಬೇಗ ಹೂವು ಕಾಯಿ ಬಿಟ್ಟು ಸತ್ತು ಹೋಗುತ್ತದೆ. ಆಮೇಲೆ ಮತ್ತೇ ಮೇಲೆಳೆವುದು ಮುಂದಿನ ಮಳೆಗಾಲಕ್ಕೆ. ಅದಕ್ಕೆ ಇದನ್ನು ಹೇಗಾದರೂ ಜ್ಞಾಪಕ ಇಟ್ಟುಕೊಳ್ಳಲು ಇದಕ್ಕೆ ಒಂದು ಕತೆಯನ್ನೇ ಕಟ್ಟಿ ಅದನ್ನೂ ಗಿಡಕ್ಕೆ ಕಟ್ಟಿಬಿಡುತ್ತಾರೆಂದು ಕಾಣುತ್ತದೆ. ಮಾರನ ಈ ಕಟ್ಟುಕತೆಗಳ ದೆಸೆಯಿಂದ ಅವನು ಹೇಳುವುದರಲ್ಲಿ ಯಾವುದು ಸುಳ್ಳೋ, ಯಾವುದು ನಿಜವೋ ಗೊತ್ತಾಗಲಿಲ್ಲ. ಈ ಪರಿಸ್ಥಿತಿ ಇವತ್ತು ಮಾರನ ಹೇಳಿಕೆಗಳಿಗೆ ಮಾತ್ರವಲ್ಲ. ಇಡೀ ಭಾರತೀಯ ನಾಟಿ ವೈದ್ಯ ಪದ್ಧತಿಗೆ ಹಿಡಿದಿರುವ ಪೀಡೆ.

ಹೀಗೆ ಆ ಮಾರನ ಕಟ್ಟುಕತೆಗಳನ್ನು ಓದುಗರ ಮುಂದಿಡುತ್ತಾ ಅದಕ್ಕೆ ತಮ್ಮ ವಿಚಾರಗಳನ್ನು ಹೇಳುತ್ತಾ ಮೂಢನಂಬಿಕೆಯ ಹಿಂದಿರುವ ವೈಚಾರಿಕ ನಿಲುವುಗಳನ್ನು ತೆರೆದಿಡುತ್ತಾರೆ. ಹಾಗೆಯೇ ಮಾರ

ಹಾಗೂ ನಿರೂಪಕನ ಸಂಭಾಷಣಾ ಶೈಲಿ ಮೇಲ್ನೋಟಕ್ಕೆ ಹಾಸ್ಯಮಯವಾಗಿ ಕಂಡರು ಅದರ ಹಿಂದಿರುವ ವೈಚಾರಿಕ ನಿಲುವುಗಳನ್ನು ಕಟ್ಟಿಕೊಡುವಲ್ಲಿ ನಿರೂಪಕ ಯಶಸ್ವಿಯಾಗುವುದನ್ನು ಕಾಣಬಹುದು.

"ಒಮ್ಮೆ ಮಾರ ಹಳ್ಳದ ಪಕ್ಕದಲ್ಲಿದ್ದ ಗಿಡ ಒಂದರಿಂದ ಕಡ್ಡಿ ಮುರಿದು ಅದನ್ನು ಜಗಿದು ಬ್ರಷ್‌ನಂತೆ ಮಾಡಿ ಬಲಗಡೆಯಿಂದ ತಿಕ್ಕಲು ಪ್ರಾರಂಭ ಮಾಡಿದೊಡನೆ ಉಜ್ಜಿದ ಹಲ್ಲುಗಳಷ್ಟು ಬಿದ್ದವಂತೆ. ಅದಕ್ಕೆ ನಿರೂಪಕರು. 'ಲೋ ಮಾರ, ಸುಳ್ಳು ಹೇಳಿದರೂ ನಂಬೋ ಅಂತ ಸುಳ್ಳು ಹೇಳಬೇಕು ಕಣೋ' ಎಂದು ಅವನ ಕತೆ ಕೇಳಿದ ಮೇಲೆ ಗದರಿದೆ. 'ಸುಳ್ಳು ಯಾಕೆ ಹೇಳಲಿ? ಅಷ್ಟು ಹಲ್ಲು ಬಿದ್ದೋಗಿರೋದು ಕಾಣೋಲ್ಲವ? ಹಾಗಾದರೆ ಅದ್ಯಾವ ಗಿಡ ತೋರಿಸ್ತಿಯಾ? 'ಕಾಡಿನಾಗೆ ಇಷ್ಟೊಂದು ಗಿಡ ಇದಾವೆ, ಅದ್ರಾಗೆ ಯಾವುದು ಅಂತ ತೋರಿಸಲಿ ಅಯ್ಯ?

ಒಂದು ಕೆಲಸ ಮಾಡಿ ಈ ಕಾಡಿನಾಗೆ ಇರೋ ಗಿಡದ ಕಡ್ಡಿನೆಲ್ಲಾ ಮುರಿದು ತಿಕ್ಕಿ ನೋಡ್ತಾ ಬನ್ನಿ, ಯಾವುದು ಅಂತ ಪತ್ತೆ ಮಾಡಬಹುದು.

'ನಾನ್ಯಾಕೆ ನೋಡಲಿ, ಈಗ ಸುಳ್ಳು ಹೇಳ್ತಿರೋದು ನೀನು ತಾನೆ? ನೀನೇ ತಿಕ್ಕಿ ನೋಡಿ ಪತ್ತೆ ಮಾಡು'

'ಅಯ್ಯೋ, ಈ ಕಾಡಿನೊಳಗೆ ಎಷ್ಟೊಂದು ಗಿಡ ಇದ್ದಾವೆ! ಅದನ್ನೆಲ್ಲ ತಿಕ್ಕಿ ನೋಡುವಷ್ಟು ಆಯಸ್ಸು ಇದೆಯಾ ನನಗೆ?

'ಅಲ್ಲೋ ತಿಕ್ತ ನೋಡ್ತಾ ಬಂದರೆ ಆಕಸ್ಮಾತ್ ಹಲ್ಲು ಮತ್ತೇ ಹುಟ್ಟೋ ಹಂಗೆ ಮಾಡೋ ಮೂಲಿಕೆ ಸಿಗಬಹುದು.'

'ಯಾವುದು ಕೈಗೆ ಸಿಗ್ಗದೆ ಅಂತ ಹ್ಯಾಗೆ ಹೇಳೋದ್ರಯ್ಯ?

ಆಕಸ್ಮಾತ್ ಗ್ರಹಚಾರ ಕೆಟ್ಟು ಜೀವ ತೆಗಿಯೋ ಗಿಡ ಕೈಗೆ ಬಂದರೆ!

'ಹಂಗಾದರೆ ನಂಗೆ ಯಾಕೆ ಹೇಳ್ತಿಯಾ?

ನೀವು ತಾನೆ ಸುಳ್ಳು ಅಂತ ಹೇಳ್ತಿರೋದು? ನಿಮಗೆ ನಂಬಿಕೆ ಇಲ್ವಲ್ಲ.

ಆಕಸ್ಮಾತ್ ನಿನ್ನ ಹುಡಗನ್ನ ಮಾಡೋ ಅಂತ ಮೂಲಿಕೆ ಸಿಕ್ಕರೆ ಏನ್ಮಾಡ್ತಿಯೋ?

ಅದು ಸಿಕ್ಕರೂ ನನಗೆ ಬ್ಯಾಡ, ಹುಡುಗ ಆದರೆ ಮತ್ತೊಂದು ಸಾರಿ ಮದುವೆ ಆಗಬೇಕಲ್ಲ. ಒಂದು ಅಸಂಗತ ನಾಟಕದ ತುಣುಕಿನಂತೆ ಕಾಣುವ ಈ ಭಾಗ ನಮ್ಮ ಸದ್ಯದ ಅಸಂಬದ್ಧ ಸ್ಥಿತಿಗೆ ಒಡ್ಡಿದ ರೂಪಕದಂತಿದೆ. ಹಾಗೆಯೇ, ನಿರೂಪಕನ ವಿಚಾರಗಳು ಮಾರನ ಮೂಢನಂಬಿಕೆ ಪ್ರತ್ಯುತ್ತರಗಳು ಓದುಗರಿಗೆ ಹಾಸ್ಯರಸವನ್ನು ಸ್ಫುರಿಸುತ್ತವೆ.

'ಪರಿಸರದ ಕತೆ'ಯಲ್ಲಿ ತೇಜಸ್ವಿಯವರ ಗ್ರಾಮಕಲ್ಪನೆ ಪೂರ್ಣಬದಲಾಗಿದೆ ಏಕೆಂದರೆ ಮೇಲ್ನೋಟಕ್ಕೆ ರೂಕ್ಷವೂ, ಒರಟು ಆಗಿ ತೋರುವ ಈ ಪಶು ಸದೃಶ್ಯ ಶೂದ್ರಸಮುದಾಯದಿಂದಲೇ ತೇಜಸ್ವಿ ತಮ್ಮ ಸೃಜನಶೀಲ ಪ್ರೇರಣೆಗಳನ್ನು ಪಡೆಯುತ್ತಿದ್ದಾರೆ. ಈ ಸಮುದಾಯದಲ್ಲಿ ಅಡಗಿರುವ ರಹಸ್ಯ

ಗೌಪ್ಯ, ಅದ್ಭುತಗಳ ನಿರಂತರ ನಿಧಿಯನ್ನು ತೇಜಸ್ವಿ ಈಗ ಗಮನಿಸುತ್ತಿದ್ದಾರೆ. ನಮ್ಮ ಅಸಹನೆ, ಅವಗಣನೆಗಳಿಗೆ ತುತ್ತಾಗಿ ನಮ್ಮಿಂದ ದೂರವಾಗಿದ್ದ ನಮ್ಮ ಸಮುದಾಯಗಳು ಜತನವಾಗಿ ಕಾಪಿಟ್ಟುಕೊಂಡು ಬಂದಿದ್ದ ನಮ್ಮ ಆಧುನಿಕ ಶಿಕ್ಷಣದ ಪರಿಣಾಮವಾಗಿ ನಮಗೆ ಇನ್ನೂ ಸರಿಯಾಗಿ ಅರ್ಥವಾಗದಿರುವ ಜ್ಞಾನಸಂಪತ್ತು ಈ ಪಶುಸದೃಶ್ಯ ಶೂದ್ರಸಮುದಾಯದ ಗರ್ಭದಲ್ಲಿ ಸುಪ್ತವಾಗಿರುವುದನ್ನು ಲೇಖಕರು ಕಂಡುಕೊಂಡಿದ್ದಾರೆ. ಆದರೆ ಈ ಸಮುದಾಯದೊಂದಿಗಿನ ಅನುಸಂಧಾನ ಕೇವಲ ಕಷ್ಟಸಾಧ್ಯ. ತೇಜಸ್ವಿ ಬರಹಗಳ ರಚನಾ ವಿನ್ಯಾಸವನ್ನು ಗಮನಿಸಿದಾಗ ಈ ಅನಕ್ಷರಸ್ಥರು ಗಟ್ಟಿಪಾತ್ರಗಳಾಗಿಯೂ, ನಿರೂಪಕರು ಕೊಂಚ ಹಾಸ್ಯಾಸ್ಪದವಾಗಿಯೂ ಕಾಣುವುದು ಇದೇ ಕಾರಣಕ್ಕಾಗಿ. ಹಾಗಾಗಿ ತೇಜಸ್ವಿಯವರ ನಿಲುವಿನಲ್ಲಿ ಒಂದು ಮೂಲಭೂತ ನಿರ್ಣಾಯಕ ಪಲ್ಲಟ ಗೋಚರಿಸುತ್ತದೆ. ಸಾಕ್ಷರರಾಗಬೇಕಾದದ್ದು ವಿದ್ಯಾವಂತರಾಗಬೇಕಾದದ್ದು ಈ ಪಶು ಸದೃಶ ಶೂದ್ರ ಸಮುದಾಯವಲ್ಲ. ಅದಕ್ಕಿಂತ ಹೆಚ್ಚಾಗಿ ಸಾಕ್ಷರರಾಗಿರುವ ಆ ಕಾರಣದಿಂದ ರಾಕ್ಷಸರೂ ಆಗಿರುವ ನಮಗೆ ಭಾರತವನ್ನು ಅರಿಯಲು ಸಾಧ್ಯವಾಗಬಹುದಾದ ಹೊಸ ಬಗೆಯ ಶಿಕ್ಷಣವೊಂದರ ಅಗತ್ಯವಿದೆ ಎಂದು ತೇಜಸ್ವಿ ಕಥನ ಪ್ರತಿಪಾದಿಸುವ ಹಾಗೆ ಕಂಡುಬರುತ್ತದೆ. 'ಮೂಲಿಕೆ ಬಳ್ಳಿಯ ಸುತ್ತ' ಕತೆಯಲ್ಲಿ ನಿರೂಪಕ ಗಡ್ಡೆಯೊಂದನ್ನು ತಿಂದು ತನ್ನದೊಂದು ಸಮಸ್ಯೆಗೆ ಪರಿಹಾರಕಂಡುಕೊಂಡ ಅನುಭವ ನಿರೂಪಿಸುತ್ತಾನೆ.

"ನನಗೆ ಬಲಗಾಲು ಹಿಮ್ಮಡಿ ಅನೇಕ ದಿನಗಳಿಂದ ನೋಯುತ್ತಿತ್ತು. ಹೆಚ್ಚಿಗೆ ದೂರ ನಡೆದರೆ ಸಾಕು, ಕುಂಟಿಕೊಂಡೆ ನಡೆಯಬೇಕಿತ್ತು. ಇದರೊಡನೆ ಈಚೆಗೆ ಹಿಮ್ಮಡಿ ಎಲುಬಿನ ಒಂದು ದಪ್ಪ ಗಡ್ಡೆ ಎದ್ದಿತ್ತು. ಡಾಕ್ಟರರು ಅದನ್ನು ಶಸ್ತ್ರಚಿಕಿತ್ಸೆ ಮಾಡಿ ತೆಗೆಯಬೇಕೆಂದು ಹೇಳಿದ್ದರು. ಕೃಷ್ಣನ ಹತ್ತಿರ ಆ ಗಡ್ಡೆ ಚೂರು ತಿಂದ ಮೇಲೆ ಎರಡು ದಿನಕ್ಕೆ ನೋಡುತ್ತೇನೆ ಆ ಗೆಡ್ಡೆ ಎಲ್ಲಿತ್ತೆಂದು ಪತ್ತೆಮಾಡಲಾಗದಂತೆ ಮಂಗ ಮಾಯವಾಯಿತು. ಇದು ಮೂಲಿಕೆ ಬಳ್ಳಿಯ ಪ್ರಭಾವ ಎಂದು ಹೇಗೆ ಹೇಳಲಿ? ಕೇವಲ ಆಕಸ್ಮಿಕ ಇದ್ದರೂ ಇರಬಹುದು. ಅಥವಾ ಮೂಲಿಕೆ ಬೀಳಿನದೇ ಪ್ರಭಾವ ಎಂದಾದರೂ ಮನುಷ್ಯ ದೇಹದಲ್ಲಿ ಉಂಟಾಗುವ ಗಡ್ಡೆಗಳಲ್ಲಿ ಅನೇಕ ತರಹವು ಇದೆ. ಇವುಗಳಲ್ಲಿ ಕೆಲವು ಗಡ್ಡೆಗಳ ಮೇಲೆ ಮಾತ್ರ ಮೂಲಿಕೆ ಬಳ್ಳಿ ಪ್ರಭಾವ ಬೀರಬಹುದು. ಇವುಗಳನ್ನೆಲ್ಲ ಯಾರು ಸಂಶೋಧಿಸುವವರು? ಮಾರನಂತವರಿಗೆ ಸಂಶೋಧಿಸಿ ಆಗ ಬೇಕಾದದ್ದು ಏನೂ ಇಲ್ಲ"

ತೇಜಸ್ವಿಯ ಚಿಂತನೆ ಮತ್ತು ಬರವಣಿಗೆಗಳ ಒಂದು ನಿರಂತರ ಮುಖ್ಯ ಕಾಳಜಿ ಎಂದರೆ ಸಾಕ್ಷರತೆ, ವಿದ್ಯಾಭ್ಯಾಸ, ಶಿಕ್ಷಣ ಮತ್ತು ಸಂವಹನ ಈ ಕುರಿತು ಬೇರೆ ಬೇರೆ ಸಂದರ್ಭಗಳಲ್ಲಿ ಅವರು ತಮ್ಮ ವಿಚಾರಗಳನ್ನು ಸ್ಪಷ್ಟವಾಗಿ, ನಿಷ್ಠುರವಾಗಿ ಪ್ರತಿಪಾದಿಸುತ್ತ ಬಂದಿದ್ದಾರೆ. ಆದರೆ ತೇಜಸ್ವಿಯವರ ನೆಲೆ ಕೇವಲ ಪ್ರತಿಕ್ರಿಯಾತ್ಮಕವಲ್ಲ ಎಂಬುದನ್ನು ಈಗಾಗಲೇ ಗುರುತಿಸಿಕೊಂಡಿದ್ದೇವೆ. ಈ ಕುರಿತ ಅವರ ಕ್ರಿಯಾತ್ಮಕ ಪ್ರಯತ್ನಗಳು ಆಧುನಿಕ ಕನ್ನಡ ಗದ್ಯ ಬರವಣಿಗೆಗೆ ಬಹು ಅಮೂಲ್ಯವಾದ ಕಾಣಿಕೆಗಳು ತೇಜಸ್ವಿಯವರ ಈ ಸಾಧನೆಗೆ ಹೋಲಿಕೆಗೆ ಸಿಕ್ಕುವವರು ಪ್ರಾಯಶಃ ಶಿವರಾಮಕಾರಂತರು ಮಾತ್ರ. ಆದರೆ

ತೇಜಸ್ವಿಯವರ ಶಿಕ್ಷಣ, ಮನರಂಜನೆ, ಗಂಭೀರ-ಜನಪ್ರಿಯ ಎಂಬಂತಹ ದ್ವಿದ್ವ ವಿಭಜನೆಯನ್ನು ಮೀರಿದ ಹದವನ್ನು ಸಾಧಿಸಿದ್ದಾರೆ.

ತೇಜಸ್ವಿಯವರ ಕತೆಗಳಲ್ಲಿ ದೆವ್ವ, ಭೂತ, ಪಿಶಾಚಿಗಳ ಪ್ರಸ್ತಾಪ ಮೊದಲಿನಿಂದ ಬಂದಿದೆ. 'ಹುಲಿಯೂರಿನ ಸರಹದ್ದು' ಸಂಕಲನದ ಪಂಜ್ರೊಳ್ಳಿ ಪಿಶಾಚಿಯ ಸವಾಲು, ಅಬಚೂರಿನ ಪೋಸ್ಟಾಫೀಸು ಸಂಕಲನದ 'ಅವನತಿ', ಕುಬಿ ಮತ್ತು ಇಯಾಲ, ಪರಿಸರದ ಕತೆಯಲ್ಲಿ ಸಂಬಳಕ್ಕೆ ಸಿಕ್ಕಿಕೊಂಡ ದೆವ್ವ, ಕುಕ್ಕುಟ ಪಿಶಾಚ-ಹೀಗೆ ದೆವ್ವಗಳ ವಿಚಾರ ಒಂದಿಲ್ಲ ಒಂದು ಬಗೆಯಲ್ಲಿ ತೇಜಸ್ವಿ ಬರವಣಿಗೆಯಲ್ಲಿ ಕಾಣಿಸಿಕೊಂಡಿದೆ. ಈ ಬಗ್ಗೆ ಯಾವ ನಿಶ್ಚಿತ ತೀರ್ಮಾನವನ್ನು ಲೇಖಕರು ಪ್ರಕಟಿಸಿದೆ ದೆವ್ವದ ಬಗ್ಗೆ ಒಂದು ಬಗೆಯ ನಿರಂತರ ಕುತೂಹಲವನ್ನು ಮಾತ್ರ ಕಾಯ್ದುಕೊಂಡು ಬಂದಿದ್ದಾರೆ. ದೇವರ ಬಗೆಗಿನ ಕುತೂಹಲಕ್ಕಿಂತ ದೆವ್ವಗಳ ಬಗೆಗಿನ ಕುತೂಹಲವನ್ನು ಲೇಖಕರು ಇದುವರೆಗಿನ ತಮ್ಮ ಬರವಣಿಗೆಯ ಜೀವನದ ಎಲ್ಲಾ ಘಟ್ಟಗಳಲ್ಲೂ ತೋರಿದ್ದಾರೆ.

ಇಲೆಲ್ಲಾ ಗಮನಿಸಬೇಕಾದ ಒಂದು ಅಂಶವೆಂದರೆ ಕೆಲವೊಮ್ಮೆ ದೆವ್ವದ ಪ್ರಸ್ತಾಪ ಕೇವಲ ಮೂಢನಂಬಿಕೆಯ ಸೂಚನೆಯಾಗಿ ಬರುತ್ತದೆ. ಕೆಲವೊಮ್ಮೆ ವೈಚಾರಿಕ ಸತ್ಯಾನ್ವೇಷಣೆಗೆ ನಿಮಿತ್ತ ಮಾತ್ರವಾಗಿ ಬರುತ್ತದೆ. ತಮಾಷೆಗಾಗಿ, ಭ್ರಮೆಯೊಂದರ ರಹಸ್ಯ ಸ್ಫೋಟಕ್ಕಾಗಿ ಬರುತ್ತದೆ. ಅಂದರೆ ದೆವ್ವದ ಪ್ರಸ್ತಾಪ ಮತ್ಯಾವುದೋ ವಿಷಯಕ್ಕೆ ತಳುಕು ಹಾಕಿಕೊಂಡೇ ಇರುತ್ತದೆ. ಆದರೆ 'ಮಾಯಾಮೃಗ'ದಲ್ಲಿ ದೆವ್ವ ಲೇಖಕರ ಸ್ವಚ್ಛಂದ ಕಲ್ಪನಾ ವಿಲಾಸವಾಗಿ ಮೂಡಿಬರುತ್ತದೆ. ಈ ಕಥೆಯಲ್ಲಿ ದೆವ್ವ ಕೇವಲ ಒಂದು ಉಪಕತೆಯಾಗಿ ಬರುವುದಿಲ್ಲ. ದೆವ್ವವೇ ಈ ಕಥೆಯ ಕೇಂದ್ರ ಸ್ಥಾಯಿ ಕುತೂಹಲ. ಇಲ್ಲಿ ಬರುವ ಸಂಭಾಷಣಾ ಲಹರಿ ಓದುಗರಿಗೆ ಕುತೂಹಲದ ಜೊತೆಗೆ ವಿನೋದಾತ್ಮಕವಾಗಿದೆ. 'ಹುಲಿಯೂರಿನ ಸರಹದ್ದು'ವಿನಿಂದ 'ಕಿರಿಗೂರಿನ ಗಯ್ಯಾಳಿಗಳು'ವರೆಗೆ ತೇಜಸ್ವಿ ಕಥನದ ಜೀವನ ದೃಷ್ಟಿಯ ಪಲ್ಲಟಗಳ ವಿವಿಧ ಘಟ್ಟಗಳನ್ನು ಗುರುತಿಸಿಕೊಳ್ಳಲು ಸಾಧ್ಯವಿದೆಯಷ್ಟೇ. 'ದೆವ್ವ' ಎಂಬ ವಸ್ತುವಿನ ನಿರ್ವಹಣೆಯ ಕ್ರಮದಲ್ಲೂ ಈ ಪಲ್ಲಟಗಳನ್ನು ಅಭ್ಯಾಸ ಮಾಡಲು ಸಾಧ್ಯವಿದೆ. 'ಮಾಯಾಮೃಗ' ಕತೆಯಲ್ಲಿ ದೆವ್ವದ ಅಸ್ತಿತ್ವ, ಸ್ವರೂಪ, ಕುರಿತ ಸ್ವಾರಸ್ಯಕರ ಚರ್ಚೆಗಳಿವೆ. ಆದರೆ ಅವು ಒಣ ವೈಚಾರಿಕ ಜಿಜ್ಞಾಸೆಗಳಲ್ಲ. ಹಾಗೆಂದು ಈ ಕತೆ ದೆವ್ವಗಳ ಅಸ್ತಿತ್ವದ ಸಮರ್ಥನೆಯನ್ನು ಮಾಡುವುದಿಲ್ಲ. ಒಂದು ಅನುಭವ ಕಥನದ ಮೂಲಕ ದೆವ್ವದ ಕಲ್ಪನೆಯನ್ನೇ ಸಮಸ್ಯಾತ್ಮಕಗೊಳಿಸುತ್ತದೆ.

ಈ ಪ್ರಕ್ರಿಯೆ ಕಥೆಯ ಆರಂಭದಲ್ಲೇ ಸೂಚಿತವಾಗುತ್ತದೆ. ದೆವ್ವ ಒಂದು ಭೌತವಾಸ್ತವವೇ? ಅಭೌತ ವಾಸ್ತವವೇ? ಅಭೌತ ವಾಸ್ತವವನ್ನು ನಾವು ಗ್ರಹಿಸುವುದು ಹೇಗೆ? ಎಂಬ ಗಂಭೀರ ಪ್ರಶ್ನೆಗಳನ್ನು ಕತೆ ಲೇಖಕರಿಗೆ ಟಿಪಿಕಲ್ ಆದ ಕಾಮಿಕ್ ದಾಟಿಯಲ್ಲಿ ಎತ್ತುತ್ತಾ ಹೋಗುತ್ತದೆ. ದೆವ್ವ ಇದೆ ಎನ್ನುವುದಾದರೆ ಅದಕ್ಕೊಂದು ರೂಪ ಇರಬೇಕಾಗುತ್ತದೆ. ಏಕೆಂದರೆ ದೆವ್ವಕ್ಕೆ ರೂಪ, ಆಕಾರ, ಇಲ್ಲದಿದ್ದರೆ ನಾವು ಅದನ್ನು ಗ್ರಹಿಸುವುದಾದರೂ ಹೇಗೆ? ಅಂದರೆ ದೆವ್ವ ಒಂದು ಅಭೌತ ವಾಸ್ತವವೇ ಆಗಿದ್ದರೂ

ಭೌತವಾಸ್ತವವಾಗಿ ಬಂದರೆ ಮಾತ್ರ ದೆವ್ವ ಇದೆ ಎಂದು ನಮಗೆ ಗೊತ್ತಾಗುವುದು ಎಂಬ ಸ್ವಾರಸ್ಯಕರ ಜಿಜ್ಞಾಸೆಯಿಂದ ಕತೆ ಪ್ರಾರಂಭವಾಗುತ್ತದೆ. ಆದರೆ ಸಮಸ್ಯೆ ಇಲ್ಲಿಗೆ ಮುಕ್ತಾಯವಾಗುವುದಿಲ್ಲ. ಕತೆಯ ಒಂದು ಪಾತ್ರವಾದ ಷಾ ಇನ್ನೊಂದು ಪಾತ್ರವಾದ ನಿರೂಪಕನನ್ನು ಮತ್ತೊಂದು ಸ್ವಾರಸ್ಯಕರ ಪ್ರಶ್ನೆ ಕೇಳುತ್ತಾರೆ.

"ಈಗ ಮಸಲ ಅದಕ್ಕೆ ಯಾವುದೇ ಒಂದು ರೂಪ ಇದೆ ಅನ್ನಿ ಅಥವಾ ಯಾವುದೋ ಒಂದು ರೂಪ ಧರಿಸಿ ಬಂತೂ ಅನ್ನಿ. ಆವಾಗ ದೆವ್ವ ಈ ರೂಪದಲ್ಲಿ ಬಂದಿದೇ ಅಂತ ನಾವು ತಿಳಿಯೋದು ಹೇಗೆ?"

ಷಾ ಮತ್ತು ನಿರೂಪಕ ತದ್ವಿರುದ್ಧ ನೆಲೆಗಳಲ್ಲಿರುವ ಪಾತ್ರಗಳಲ್ಲ ಎಂಬುದು ಗಮನಾರ್ಹ. ಅವರಿಬ್ಬರೂ ಕೂಡಿಕೊಂಡು ಈ ಪ್ರಶ್ನೆಯನ್ನು ಬಿಡಿಸಿಕೊಳ್ಳಲು ದೆವ್ವ ಇದ್ದರೆ ಪ್ರತ್ಯಕ್ಷ ನೋಡಿ ಬಿಡಲು ಸ್ಮಶಾನಕ್ಕೂ ಹೋಗುತ್ತಾರೆ. ಷಾ ಕೇಳುವ ಇನ್ನೊಂದು ಪ್ರಶ್ನೆ ಗಂಭೀರವೂ ಹೌದು ವಿನೋದ ಪೂರ್ಣವೂ ಹೌದು.

"ನಿಮ್ಮ ವೇಷ ಹಾಕಿಕೊಂಡು ನನ್ನೆದುರು ಬಂದರೆ, ನನ್ನ ವೇಷದಲ್ಲಿ ನಿಮ್ಮೆದರು ನಿಂತರೆ ಅವಾಗ ಏನ್ರಿ ಮಾಡೋದು?"

ಅದಕ್ಕೆ ಷಾ ಒಂದು ಉಪಾಯ ಮಾಡುತ್ತಾರೆ. ಒಂದು ರಹಸ್ಯ ಸಂಕೇತವನ್ನು ತಮಗಿಬ್ಬರಿಗೆ ಮಾತ್ರ ಗೊತ್ತಾಗುವ ಮಂತ್ರವನ್ನು ಇಟ್ಟುಕೊಂಡರೆ ಈ ಅಪಾಯದಿಂದ ತಪ್ಪಿಸಿಕೊಳ್ಳಬಹುದು ಎಂದು. ಕತೆ ನಿರೂಪಕನಿಗೆ ಒಂದು ಘಟ್ಟದಲ್ಲಿ ಈ ಸಿಕ್ರೇಟ್ ಕೋಡ್ ಮರೆತು ಹೋಗಿ ಇವನೇ ದೆವ್ವವಿರಬಹುದು ಎಂಬ ಅನುಮಾನ ಬಂದು ನಿರೂಪಕನನ್ನು ಹೊಡೆಯಲು ಹೋಗುತ್ತಾನೆ. ಈ ಸನ್ನಿವೇಶ ಶೋಧನೆ ವೈಚಾರಿಕತೆಯ ಹಿಂದಿನ ಅವರ ಭಯ, ಆತಂಕಗಳೆರಡನ್ನು ಕಟ್ಟಿಕೊಡುತ್ತದೆ. ಸ್ಮಶಾನದಲ್ಲಿ ಎಷ್ಟು ತಿರುಗಾಡಿದರೂ, ಎಷ್ಟು ಕಾದರೂ ದೆವ್ವ ಅವರಿಗೆ ಕಾಣಿಸಿಕೊಳ್ಳುವುದಿಲ್ಲ. ಊರಿಗೆ ಮರಳಲು ಸಿದ್ಧವಾಗುತ್ತಾರೆ. ನಿರೂಪಕನಿಗೆ ಆಗ ಹೀಗೆ ಅನ್ನಿಸುತ್ತದೆ.

"ದೆವ್ವ ಇರುವುದರ ಬಗೆಗಾಗಲೀ, ಅದು ಮನುಷ್ಯರಿಗೆ ಕಾಣಿಸಿಕೊಳ್ಳುತ್ತದೆನ್ನುವುದರ ಬಗೆಗಾಗಲೀ ನಮಗೆ ಸುತಾರಾಂ ನಂಬುಗೆ ಇರಲಿಲ್ಲ. ಆದರೆ ದೆವ್ವವನ್ನು ನಂಬದಿರುವುದಕ್ಕೂ, ಭಯಕ್ಕೂ ಯಾವ ಸಂಬಂಧವೂ ಇಲ್ಲೆಂದು ತೋರುತ್ತದೆ. ನಾವು ಆಲೋಚಿಸುವಾಗ ನಾಸ್ತಿಕರೂ ವಿಚಾರವಾದಿಗಳೂ ಆಗಿರುತ್ತಾ. ಕತ್ತಲ ಏಕಾಂತದಲ್ಲಿ ಹೃದ್ಗತ ಭಾವನೆಗಳನ್ನು ಮೆಲುಕು ಹಾಕುವಾಗ ದೆವ್ವ ಇದ್ದರೇನೋ ಎಂಬ ಗುಮಾನಿಯುಳ್ಳ ಪುಕ್ಕಲರಾಗಿದ್ದೇವೆ"

ಷಾ ಮತ್ತು ನಿರೂಪಕ ಮಧ್ಯರಾತ್ರಿಯಲ್ಲಿ ಸ್ಮಶಾನದಿಂದ ಊರಿಗೆ ಹಿಂದಿರುಗುವಾಗ ಒಂದು ನಾಯಿಮರಿ ಅವರನ್ನು ಹಿಂಬಾಲಿಸುತ್ತದೆ. ಷಾ ಹೇಳುತ್ತಾರೆ. 'ಟಾಮಿನೂ ಅಲ್ಲ, ಟೈಗರೂ ಅಲ್ಲ. ಇದರ ಹೆಸರು ಡೆತ್, ಸಾವು, ಮೃತ್ಯು ಅದಕ್ಕೆ ಅದು ಸ್ಮಶಾನದಲ್ಲಿ ಇದ್ದಿದ್ದು. ಅದನ್ನು ಈಗ ಊರಿಗೆ

ಕರೆದುಕೊಂಡು ಬಂದು ನಾವು ತಪ್ಪು ಮಾಡಿದೆವು. ಈ ನಾಯಿ ಮರಿಯನ್ನು ಇಟ್ಟುಕೊಂಡು ಸ್ವಲ್ಪ ಹುಡುಗಾಟವಾಡಲು ಷಾ ಮತ್ತು ನಿರೂಪಕ ಪ್ರಾರಂಭಿಸುತ್ತಾರೆ. ಯಾರದೋ ಮನೆಯ ಗೇಟು ತೆಗೆದು ಕಾಂಪೌಂಡಿನಲ್ಲಿ ನಾಯಿಮರಿಯನ್ನು ಬಿಡುವುದು, ಮನೆಯಾತ ಅದನ್ನು ಓಡಿಸುವುದು, ಇವರು ಮತ್ತೆ ಬಿಟ್ಟು ಬರುವುದು. ಹೀಗೆ ಕಣ್ಣಾಮುಚ್ಚಾಲೆ ಆಟ ಸಾಗುತ್ತದೆ. ಮನೆಯಾತನಿಗೆ ಅನುಮಾನ ಬಂದು ಗೇಟಿನ ಬಳಿಯಲ್ಲೇ ನಿಂದು ಈ ಗೊಂದಲದ ಮೂಲವನ್ನು ಪತ್ತೆ ಮಾಡಿಬಿಡಲೇಬೇಕೆಂದು ಕಾಯುತ್ತಾನೆ. ಈ ಸ್ನೇಹಿತರೂ ಮರೆಯಲ್ಲಿ ಅಡಗಿ ಕಾಯುತ್ತಾರೆ. ಆ ಮನೆಯಾತನಿಗೆ ಇದು ಪಿಶಾಚಿಯ ಕೆಲಸವೆ ಎಂದು ಗುಮಾನಿ ಬಂದಿತ್ತೇನೋ! ಆದರೆ ಆತನಿಗೇನೋ ಅನುಮಾನ! ದೆವ್ವದ ಕಾಟವೆಂದು ನಂಬಲು! ಸಂಶಯ, ಈ ಕೆಲಸದ ಹಿಂದೆ ಏನೋ ಬುದ್ಧಿವಂತಿಕೆ ಇದೆ ಎನ್ನುವ ಗುಮಾನಿ. ಗೇಟು ಹಾಕಿದವನು ಒಳಗೆ ಹೋಗದೆ ಗೇ.ಟಿನ ಮೇಲೆ ತಲೆ ಇಟ್ಟುಕೊಂಡು ಕಾಯತೊಡಗಿದ.

ಇಲ್ಲಿ ನಿರೂಪಕ ವಿಚಾರವಾದಿಗಳ ಒಳಗೂ ಹೊರಗುಗಳನ್ನು ಹೇಳುತ್ತಾ ಸಾವಿನ ಸಂಕೇತ ಎಂದು ಆ ನಾಯಿಯನ್ನು ಹೇಳುವುದು ಡೆತ್ ನಮ್ಮೆದುರು ಕತ್ತಲಲ್ಲಿ ಕತ್ತಲಾಗಿ ಬಾಲ ಅಲ್ಲಾಡಿಸುತ್ತಾ ನಿಂತಿತ್ತು. ನಾವು ಅತ್ತಿತ್ತ ಅಲ್ಲಾಡುವಂತಿರಲಿಲ್ಲ.! ನೋಡ ನೋಡುತ್ತಿದ್ದಂತೆ ಬರವಣಿಗೆ ವಾಸ್ತವಿಕ ಪಾತಾಳಿಯಿಂದ ಮೇಲೆ ಮೇಲೆಕ್ಕೆ ಜಿಗಿಯಲಾರಂಭಿಸುತ್ತದೆ. ಎಷ್ಟು ಹೊತ್ತಾದರೂ ಆ ಮನೆಯಾತ ಅಲ್ಲಾಡದೆ ಹಾಗೇ ನಿಂತಿರುತ್ತಾನೆ. ಇವರಿಗೂ ಏನೂ ಮಾಡಲು ತೋಚುವುದಿಲ್ಲ. ಎಷ್ಟೋ ಹೊತ್ತಿನ ನಂತರ ನಾಯಿಮರಿ ಆ ಮನುಷ್ಯನ ಕಡೆ ಹೆಜ್ಜೆ ಹಾಕತೊಡಗುತ್ತದೆ. ಅವನ ಮುಂದೆ ಹೋಗಿ ನಿಲ್ಲುತ್ತದೆ.

"ನಿದ್ರೆಗೆ ಸಂದುತ್ತಿದ್ದ ಅವನ ದೇಹದಲ್ಲಿ ಯಾವ ಚಲನೆಯೂ ಕಾಣಲಿಲ್ಲ. ಕೈಯಲ್ಲಿನ ಅವನ ದೊಣ್ಣೆ ಕೆಳಗೆ ಕಲ್ಲಿನ ಮೇಲೆ ಬಿದ್ದಸದ್ದಾಯ್ತು. ಇದ್ದಕ್ಕಿದಂತೆ ಬಾಗಿಲು ತೆರೆದುಕೊಂಡು ಅವನ ದೇಹ ಬಾಗಿಲ ಮುಂದಕ್ಕೆ ಹಾಕಿದ್ದ ಹಾಸುಗಲ್ಲಿನ ಮೇಲೆ ಉದ್ದಕ್ಕೆ ದೊಪ್ಪನೆ ಬಿತ್ತು, ಡೆತ್ ನಿರಾಂತಕವಾಗಿ ಅವನನ್ನು ದಾಟಿಕೊಂಡು ಅವನ ಮನೆಯೊಳಗೆ ಹೋಯ್ತು"

ಕಥೆಯ ಅಂತ್ಯವನ್ನು ಸಮಸ್ಯಾತ್ಮಾಕಗೊಳಿಸುವ ಮೂಲಕ ಲೇಖಕರು ತಮ್ಮ ಕುತೂಹಲವನ್ನು ಶೋಧವನ್ನು ಮುಕ್ತವಾಗಿಟ್ಟುಕೊಳ್ಳುತ್ತಾರೆ. ಅವರ ಪರಿಸರ ಕತೆಗಳಲ್ಲಿ ಒಂದಾದ "ಸಂಬಳಕ್ಕೆ ಸಿಕ್ಕಿಕೊಂಡ ದೆವ್ವ' ಎಂಬ ಕತೆಯಲ್ಲಿ ನಿರೂಪಕ ಮನೆಯ ನಾಯಿ ಕಿವಿ. ಯಾವಾಗಲು ನಿರೂಪಕನ ಮನೆಗೆ ಬರುವವರ ಚಪ್ಪಲಿಗಳನ್ನು ಕದ್ದುಕೊಂಡು ಹೋಗಿ ಅಲ್ಲಿ ಯಾವುದಾದರೂ ಮರದ ನೆರಳಿನಲ್ಲಿ ಕುಳಿತು ಕಚ್ಚಿ ಕಚ್ಚಿ ತುಂಡು ಮಾಡಿ ಬಿಸಾಕುತ್ತಿತ್ತು. ಒಂದು ದಿನ ನಿರೂಪಕನ ಚಪ್ಪಲಿಯನ್ನು ಕದ್ದೊಯ್ದಿರುತ್ತದೆ. ಅದಕ್ಕೆ ನಿರೂಪಕ ತನ್ನ ಕೆಲಸದಾಳು ಮಾರನನ್ನು ಕೇಳಿದಾಗ ಅವನು ಹೇಳುವ ಮಾತುಗಳು ಅದಕ್ಕೆ ನಿರೂಪಕ ಕೊಡುವ ವಿವರಣೆಗಳೂ ವೈನೋದಿಕತೆಯ ಜೊತೆಗೆ ವೈಚಾರಿಕತೆಯನ್ನು ಪ್ರತಿಬಿಂಬಿಸುತ್ತವೆ.

ಮಾರ ಒಬ್ಬ ಹಳ್ಳಿಮುಕ್ಕ ದಡ್ಡಶಿಖಾಮಣಿ ಎಂದು ಮೊದಲು ತಿಳಿದಿದ್ದೆ. ಆದರೆ ಅವನಲ್ಲಿ ಅಸಾಧಾರಣ ತಿಳುವಳಿಕೆಯೊಂದು ಮೂರ್ಖತನದ ಮುಸುಕಿನೊಳಗೆ ಕೆಲಸ ಮಾಡುತ್ತಿತ್ತು. ಇದನ್ನು ಸೂಪರ್ ಇಂಟಲಿಜೆನ್ಸ್ ಎನ್ನಬಹುದು.

'ಹೋದ ಜನ್ಮದಲ್ಲಿ ಕಿವಿ ಕಳ್ಳ ಆಗಿದ್ದರೆ ನೀನೇನು ಆಗಿದ್ದೆ ಎಂದು ಕೇಳಿದೆ.

'ನಾನಿನ್ನೇನು ಪೋಲಿಸ್ನೋನು ಆಗಿರಬೇಕು. ಅದ್ಕೇ ಈ ಜಲ್ಮದಲ್ಲಿ ತೋಟದ ಕಾವಲು ಕೆಲಸ'ಎಂದ. ಒಮ್ಮೆ ಯಾವುದೋ ಮಾತಿಗೆ ಅವನನ್ನು ನಾನು "ನಿನಗೆ ದೇವರಲ್ಲಿ ನಂಬಿಕೆ ಇದೆಯಾ? ಎಂದು ಕೇಳಿದೆ. ಮಾರನಿಗೆ ಕಣ್ಣಿಗೆ ಕಾಣುವುದು, ಕಾಣದ್ದು, ಮೂರ್ತ-ಅಮೂರ್ತಗಳಿಗೆ ಹೆಚ್ಚು ವ್ಯತ್ಯಾಸವೇ ಇರಲಿಲ್ಲ. ಅಮೂರ್ತವಾದ ಗಾಳಿಯೇ ಮೂರ್ತವಾಗಿ ಮೋಡ! ಮೂರ್ತವಾದ ಮೋಡವೇ ಅತಿಮೂರ್ತವಾದ ಮಳೆ! ನನ್ನ ಪ್ರಶ್ನೆಗೆ ಅವನು ಒಂದು ಕ್ಷಣ ಯೋಚಿಸುವ ತೊಂದರೆಯನ್ನು ತಗೊಳ್ಳಲಿಲ್ಲ, "ಒಳ್ಳೆ ಚೆನ್ನಾಗಿ ಹೇಳ್ತಿರಾ ಅಪ್ಪ ಅಮ್ಮ ಇಲ್ಲದೆ ಮಕ್ಕಳು ಹುಟ್ತಾವ?" ಎಂದು ನನ್ನನ್ನೇ ಪ್ರಶ್ನಿಸಿ ನನ್ನ ಪ್ರಶ್ನೆಯನ್ನು ಮೌಢ್ಯದ ಪರಮಾವಧಿ ಎಂದು ತಳ್ಳಿಹಾಕಿದ.

ಹೀಗೆ ನಿರೂಪಕನ ಸಂಭಾಷಣ ವೈಖರಿ ವೈಚಾರಿಕ ನಿಲುವುಗಳು ಅವರ ನಿರೂಪಿಸುವ ಜಾಣ್ಮೆಯ ಕ್ರಮದಿಂದ ನಮಗೆ ಹಾಸ್ಯಮಯವಾಗಿ ಕಂಡುಬರುತ್ತದೆ. ಹಾಗೆಯೇ ಮಾರ ನಿರೂಪಕನ ಚಪ್ಪಲಿಯನ್ನು ಅದಲುಬದಲು ಮಾಡಿ ಇಡುತ್ತಾನೆ. ಅದಕ್ಕೆ ನಿರೂಪಕರು ಮಾರನಿಗೆ ಯಾಕೋ ಮಾರ ಚಪ್ಪಲಿಯನ್ನು ಅದಲುಬದಲು ಮಾಡಿ ಇಡ್ತಿಯಾ ಅಂದೆ ಅದಕ್ಕೆ ಅವನು ಹೀಗೆ ಹೇಳುತ್ತಾನೆ. "ಚಪ್ಪಲಿ ಅದಲುಬದಲು ಇಟ್ಟರೆ ದಯ್ಯದ ಮೆಟ್ಟೂ ಅಂತ ತಿಳ್ಕೊಂಡು ಅದನ್ನ ಮುಟ್ಟೋದಕ್ಕೆ ಹೆದರ್ತವೆ. ದಯ್ಯಕ್ಕೆ ಕಾಲು ಹ್ಯಾಗಿರುತ್ತವೆ ಹೇಳಿ? ಎಡಗಾಲು ಬಲಗಾಲು ಅದಲುಬದಲು ಇರೋಲ್ಲವ? ಎಂದು ತನ್ನ ತಂತ್ರದ ಹಿಂದಿನ ಸಿದ್ಧಾಂತವನ್ನು ವಿವರಿಸದ" ಇಲ್ಲಿ ಮಾರ ನಿರೂಪಕನ ವೈಚಾಇಕ ನಿಲುವುಗಳನ್ನು ನಿರೂಪಿಸಲು ಕಾರಣವಾಗುವ ಮೂಢನಂಬಿಕೆಗಳ ವಕ್ತಾರನಾಗಿ ಕಾಣುತ್ತಾನೆ. ಆದರೆ ಅವನು ಹೇಳುವ ದಾಟಿ, ಹೇಳುವ ವಿಷಯ ನಮಗೆ ಹಾಸ್ಯಾಸ್ಪದವೆಂಬಂತೆ ನಿರೂಪಕ ತರ್ಕವಿರುತ್ತದೆ. ಒಂದು ದಿನ ಮಾರ ತೋಟ ಕಾಯಲು ಹೋಗಿ ಅಲ್ಲೆ ನಿದ್ರೆ ಮಾಡಿರುತ್ತಾನೆ. ಅದಕ್ಕೆ ನಿರೂಪಕ 'ಮಾರ ಇದೇನಾ ನೀನು ಕಾವಲು ಕಾಯೋದು? ಬೆಳಗಿನ ಹೊತ್ತೆ ನಿದ್ದೆ ಮಾಡ್ತಿದ್ದಿಯಲ್ಲ? ಎಂದೆ, 'ರಾತ್ರೆ ಒಂದು ಚಣ ಕಣ್ಣು ಮುಚ್ಚಿಲಯ್ಯ' ಹಂಗಾಗಿ ಇವತ್ತು ಯಾಕೋ ಇಲ್ಲಿ ಕೂರ್ತಿದ್ದ ಹಂಗೇ ಕಣ್ಣು ಎಳೀತು. ಹಿಂದೆ ಯಾವಾಗಲಾದರೂ ಈ ಜಾಗ ಸುಡಗಾಡು ಆಗಿತ್ತೋ ಏನೋ! ಇಲ್ಲಿ ಮಲಗಿದರೆ ಏಳಕ್ಕೆ ಮನಸ್ಸು ಬರಲ್ಲ" ಎಂದು ನಗುತ್ತಾ ತನ್ನ ನಿದ್ದೆಗೆ ಈ ಸ್ಥಳ ಮಹಿಮೆ ಕಾರಣ ಎಂದು ವ್ಯಾಖ್ಯಾನಿಸಿದ.

ತೇಜಸ್ವಿ ಅವರ ಕತೆಗಳ ಸೂಕ್ಷ್ಮತೆಯಲ್ಲಿ ಸೃಜನಶೀಲ ನಿರೂಪಣೆಯ ತಾಜಾತನದ ಪಾಲು ದೊಡ್ಡದು. ಕೃತಿಕಾರ ಕೃತಿಯಾಚೆಗಿದ್ದು ಹೇಳುವ ಮಾತು ಕಡಿಮೆ. ತಾನು ಒಳಗಿದ್ದು ಅನುಭವಿಸುವಲ್ಲಿ ನಿಕಟವಾಗುವ ಅಲೋಚನೆ ದಟ್ಟವಾದಂತಿದೆ. ಭಾಷೆಯ ಕಾರಣಕ್ಕೂ ಯಾವ ಕ್ರಾಂತಿಯು ಬೆನ್ನು

ಹತ್ತುವುದಿಲ್ಲ. ಆಯಾ ಕತೆಯ ಹಂದರ ಅಪೇಕ್ಷಿಸುವ ಭಾಷೆ ತೀರಾ ಸಹಜವಾಗಿ ವೈನೋದಿಕವಾಗಿ ಮೂಡಿಬರುತ್ತದೆ.

ತೇಜಸ್ವಿಯವರ ಕತೆಗಳಲ್ಲಿ ನಗರವು ಹಳ್ಳಿಯ ಭಾವನೆಗಳ ಸೂಕ್ಷ್ಮಸ್ತರಗಳನ್ನು ಕಂಡುಕೊಳ್ಳುವಂತೆ ಮಾತ್ರವೇ ಮಾಡದೆ ತನ್ನ ಜೀವನದ ಇನ್ನೊಂದು ಶೈಲಿಯಾದ ವೈಚಾರಿಕತೆಯನ್ನು ಬೆಳೆಸಲು ಯತ್ನಿಸುತ್ತದೆ. ತನಗೆ ಅರಿವಿಲ್ಲದೆಯೇ ನಗರದ ಜೀವನಶೈಲಿಗೆ ತನ್ನನ್ನು ತೆರೆದುಕೊಂಡ ಗ್ರಾಮೀಣ ಬದುಕು ನಗರದ ವೈಚಾರಿಕತೆಯನ್ನು ಅಷ್ಟೆ ತೀವ್ರವಾಗಿ ಒಳಗೊಳ್ಳುವುದಿಲ್ಲ. ಅವರ 'ಕುಬಿ ಮತ್ತು ಇಯಾಲ' ಕಥೆಯಲ್ಲಿ ಆಧುನಿಕ ಡಾಕ್ಟರ್ ಕುಬೇರನಿಗೆ ಬೈರಾಪುರದ 'ಕಾರ್ಯಕಾರಣ'ಬದ್ಧವಲ್ಲದ ಆ ಮೂಢ ಪ್ರಪಂಚವು ಅವನಿಗೆ ನಿಜಕ್ಕೂ ನರಕ ಸದೃಶ್ಯವಾಗಿತ್ತು.

ರೋಗದ ವಿರುದ್ಧ ಹೋರಾಡುವುದು ಎಂದರೆ ಅದಕ್ಕೆ ಅಜ್ಞಾನ, ಹಿಂದುಳಿದಿರುವಿಕೆ ಅದಕ್ಕೆ ಪೂರಕವಾದ ಅವರ ಮೂಢನಂಬುಗೆಗಳು ಹಾಗೂ ಇವೆಲ್ಲಕ್ಕೂ ಕಾರಣವಾದ ಅವರ ಬಡತನ. ಈ ಎಲ್ಲದರ ವಿರುದ್ಧ ಹೋರಾಡುವುದು ಎಂದು ಕುಬಿಗೆ ನಿಧಾನವಾಗಿ ಅರಿವಾಗತೊಡಗಿತು. ಜನತೆಯ ಮೌಢ್ಯತೆಯನ್ನು ದೂರಮಾಡಿ ಅವರಲ್ಲಿ ವಿಚಾರವನ್ನು ಬೆಳಸಲು ಕುಬಿ ಮಾಡುವ ಎಲ್ಲಾ ಪ್ರಯತ್ನವೂ ವಿಫಲವಾಗುತ್ತದೆ. ಮೌಢ್ಯ ತುಂಬಿದ ಸಮಾಜದೊಂದಿಗೆ ಅವನ ಸಂವಾದ ಕಡಿದು ಬೀಳುತ್ತದೆ. ಆದ್ದರಿಂದ ಕುಬಿಯ ವಿಚಾರವಾದವು ಸಮಾಜದೊಡನೆ ಸಂವಹನ ಸಾಧಿಸದೆ ವಿಫಲಾಗುತ್ತದೆ. "ಭೈರಾಪುರದ ಜನರ ಮೂಢನಂಬಿಕೆಯು ಕುಬಿಯ ವಿಚಾರವಾದದಿಂದ ಬದಲಾಗದಂತ ಶಾಶ್ವತ ವಸ್ತುಸ್ಥಿತಿ ಅದು. ಆ ಸ್ಥಿತಿಯು ಹಾಗೆಯೇ ಮುಂದುವರೆಯುವಂತಹದು ಎಂಬ ನಿಲುವುಗಳನ್ನು ಸಹ ಈ ಕಥೆ ಪ್ರಕಟಿಸುತ್ತದೆ.

ಭೈರಾಪುರ ಕುಬಿಯ ವೈಚಾರಿಕತೆಯನ್ನು ತನ್ನ ಬದುಕಿನ ಶೈಲಿಯೊಳಗೆ ತಂದುಕೊಳ್ಳಲು ನಿರಾಕರಿಸಿ, ತನ್ನದೇ ಮಾದರಿಯಲ್ಲಿ ಕುಬಿಯನ್ನು ಒಂದು ಅಂಧಶ್ರದ್ಧೆಯ ಕೇಂದ್ರವಾಗಿರಿಸಿಕೊಂಡು ಬಿಡುತ್ತದೆ. ಸಾಧನ-ಸಾಮಗ್ರಿಗಳ ಮೂಲಕ ಪ್ರವೇಶಿಸುವ ನಗರದ ಬದುಕನ್ನು ಒಪ್ಪಿಕೊಂಡರೂ, ಅದರ ವೈಚಾರಿಕತೆಯನ್ನು ನಿರಾಕರಿಸುವ ಗ್ರಾಮೀಣ ಜಗತ್ತನ್ನು ಅದರ ಮೌಢ್ಯತೆಯ ಬದಲಾಗದ ಸ್ಥಿತಿಯೊಡನೆಯೇ ಗುರುತಿಸಲಾಗುತ್ತದೆ. ಭಾವನೆಗಳ ಮಟ್ಟದಲ್ಲಿ ಸ್ವಲ್ಪವಾದರೂ ಪ್ರವೇಶವನ್ನು ಪಡೆಯುವ ನಗರವು. ವಿಚಾರಗಳ ಮಟ್ಟದಲ್ಲಿ ಗ್ರಾಮೀಣ ಜಗತ್ತನ್ನು ಮುಟ್ಟುತ್ತಿಲ್ಲ. ನಗರ ಪ್ರಜ್ಞೆಯೊಡನೆ ಗ್ರಾಮೀಣ ಬದುಕಿನಲ್ಲಿ ಆಗುತ್ತಿರುವ ವ್ಯತ್ಯಾಸಗಳನ್ನು ಗುರ್ತಿಸುವವರಿಗೆ ಗ್ರಾಮಗಳು ತಮ್ಮ ಮುಗ್ಧತೆಯನ್ನು ಕಳೆದುಕೊಂಡರು. ವಿಚಾರವಂತಿಕೆಯನ್ನು ತಾರ್ಕಿಕತೆಯನ್ನು ರೂಢಿಸಿಕೊಳ್ಳುತ್ತಿಲ್ಲ ಎಂಬುದನ್ನು ತೇಜಸ್ವಿ ತಮ್ಮ ಕಥೆಗಳ ಮೂಲಕ ಗುರ್ತಿಸುತ್ತಾರೆ.

ಇದರೊಡನೆ 'ಅವನತಿ' ಕತೆಯಲ್ಲಿ ನಿಷ್ಕ್ರೀಯೆಗೊಂಡ ಯಾವುದೇ ರೀತಿ ಚಲನೆಗೂ ಆಸ್ಪದಕೊಡದೆ ತನ್ನ ಪರಿಧಿಗೆ ಬರುವ ಎಲ್ಲವನ್ನು ಜಡತ್ವದೊಡನೆ ಸೇರಿಸಿಕೊಳ್ಳುವ ಕ್ರೌರ್ಯದಿಂದ

ಕೂಡಿದ ಗ್ರಾಮೀಣ ಸಮಾಜವಿದೆ. ಅಂತಿಮವಾಗಿ ಹೇಳುವುದಾದರೆ ಸುಮಾರು ಐದು ದಶಕಗಳ ಕಾಲಮಾನದ ಸಾಮಾಜಿಕ ಸಮಸ್ಯೆಗಳಿಗೆ ತೇಜಸ್ವಿಯವರ ಸಂವೇದನೆ ನಿರಂತರವಾಗಿ ನಿಷ್ಠುರವಾಗಿ ಪ್ರತಿಕ್ರಿಯಿಸುತ್ತಲೇ ಬಂದಿರುವುದು ಇದುವರೆಗಿನ ವಿಶ್ಲೇಷಣೆಯಿಂದ ತಿಳಿದುಬರುವಂತಹ ವಿಷಯ. ಈ ಬಗೆಯ ನಿಷ್ಠುರತೆ ತೇಜಸ್ವಿಯವರಂತಹ ಲೇಖಕರಿಗೆ ಹೇಗೆ ಸಾಧ್ಯ ಎಂಬ ಪ್ರಶ್ನೆ ಮುಖ್ಯವಾಗಿ ಎದುರಾಗುತ್ತದೆ. ಬಹುಶಃ ನಿರಂಕುಶಮತಿಗಳಂತೆ ತಮ್ಮ ಬರಹ ಮತ್ತು ಬದುಕನ್ನು ಅವರು ಆದಷ್ಟು ಪ್ರಾಮಾಣಿಕವಾಗಿ ಕಟ್ಟಿಕೊಳ್ಳಲು ಪ್ರಜ್ಞಾಪೂರ್ವಕವಾಗಿಯೇ ವಿನೋದಾತ್ಮಕವಾಗಿ ಸಂಭಾಷಣಾ ಶೈಲಿ ರೂಡಿಸಿಕೊಂಡಿರುವುದು ಇದಕ್ಕೆ ಕಾರಣವೆನ್ನಬಹುದು.

ಪ್ರಸ್ತುತ ಸಂದರ್ಭದಲ್ಲಿ ತೇಜಸ್ವಿಯವರಂಥ ಸಾಂಸ್ಕೃತಿಕ ಲೇಖಕರ ವೈಚಾರಿಕ ನಿಲುವುಗಳು ಸಾಂಸ್ಕೃತಿಕ ಮಹತ್ವದ ಅನನ್ಯತೆಯ ಹೋರಾಟಕ್ಕೆ ಅನುವು ಮಾಡಿಕೊಡುವ ಸಾಂಸ್ಕೃತಿಕ ದಾಖಲೆಗಳಂತಿವೆ. ಈ ಕಾರಣದಿಂದ ತೇಜಸ್ವಿ ಅವರು ನಮ್ಮ ಸಂದರ್ಭದ ಮುಖ್ಯ ಲೇಖಕರಾಗಿದ್ದಾರೆ.

### ೬.೪ ಹಾಸ್ಯ ಪ್ರತಿಪಾದನೆಯ ಮೂಲ ಉದ್ದೇಶ :-

ಪರಂಪರೆಯನ್ನು ತೀರಾ ಸಹಜ ಎಂದು ಪ್ರಸ್ತಾಪಿಸುವುದಾದರೆ ಅದರ ವಿಸ್ತಾರ ಮತ್ತು ಮಹತ್ವವನ್ನು ಗಮನಿಸಿಕೊಂಡಿರಲೇಬೇಕು. ವಿಶಿಷ್ಟತೆಯನ್ನೆವುದು ಪ್ರಾಪ್ತವಾಗುವುದು ಅಲ್ಲಿ ಮಾತ್ರ ಸಾಧ್ಯವಾಗುತ್ತದೆ. ಸಾಹಿತ್ಯದ ಸಂದರ್ಭಕ್ಕೆ ಪರಂಪರೆಯ ವಾದವನ್ನೇ ಪ್ರಯೋಗಿಸುವಾಗ ಅದು ಹಾಡು-ಕತೆಗಳ ಸ್ವರೂಪದ ಉಗಮದೊಂದಿಗೆ ತೆರೆದುಕೊಳ್ಳುವಂತಹದು. ಮನುಷ್ಯನ ಬದುಕಿನ ಪ್ರೀತಿಯ ಕಾರಣದಿಂದಲೂ ಕತೆ, ಕವನಗಳು ಸೃಷ್ಟಿಯಾದವು. ಇಂತಹ ಕತೆ, ಕವನಗಳಲ್ಲಿ ಹಾಸ್ಯವು ವಿಡಂಬನಾತ್ಮಕವಾಗಿ ಮನೋರಂಜನೆಗಾಗಿ ಬಳಕೆಯಾಗುತ್ತಾ ಬಂತು. ಅವು ಕತೆಗಳಲ್ಲಿ ಕಾಣುವ, ಕಾಣಿಸುವ ಜೊತೆಗೆ ತನ್ನನ್ನೇ ಕಂಡುಕೊಳ್ಳುವ ಕ್ರಿಯೆಯೂ ಆಗಿದ್ದವು. ಆದ್ದರಿಂದಲೇ ಅವುಗಳಿಗೆ ವಿಸ್ತಾರವಾದ ಆಯಾಮವು ನಿರಂತರ ಪ್ರಯೋಗಶೀಲತೆಯೂ ಜೊತೆ-ಜೊತೆಗೆ ಲಭ್ಯವಾಯ್ತು. ಮನುಷ್ಯನೊಂದಿಗೆ ಕತೆಯು ಕತೆಯೊಂದಿಗೆ ನವರಸಗಳು ಅದರಲ್ಲೂ ಮನುಷ್ಯನ ಮನೋರಂಜನೆಗೆ ಹಾಸ್ಯರಸವು ತನ್ನ ನಿರಂತರತೆಯನ್ನು ಪಡೆಯುತ್ತಾ ಬಂತು.

ಜನಪದದ ವಿಪುಲ ಅವಕಾಶಗಳೊಂದಿಗೆ ತೆರೆದುಕೊಂಡ ಈ ನೆಲದ ಮಣ್ಣಿನ ಗುಣದೊಂದಿಗೆ ಕಥನಕಲೆ ನಮ್ಮಲ್ಲಿ ಕನ್ನಡಿಯೋಪಾದಿಯಲ್ಲಿ ಕಾಣಿಸಿಕೊಂಡಿದೆ. ಎಲ್ಲರೊಳಗೊಬ್ಬ ಕತೆಗಾರ ಅದೇ ಪ್ರಕಾರ ವಿಡಂಬಕ ಅಡಗಿಕುಳಿತಿರುವುದು ಇದೇ ರೂಪದಲ್ಲಿ.

ಕನ್ನಡ ಕಥೆಗಳ ಇತಿಹಾಸಕ್ಕೆ ಹೋದರೆ 'ಹಾಸ್ಯವಿಲ್ಲದೆ ಕಥೆಯಿಲ್ಲ' ಎಂಬ ಎ.ಆರ್.ಕೃಷ್ಣಶಾಸ್ತ್ರೀಗಳ ಮಾತು ಇಲ್ಲಿ ಉಲ್ಲೇಖನೀಯ. ಹಿಂದೆ ನಮ್ಮ ಕತೆಗಾರರು ನೀತಿಬೋಧನೆಯನ್ನು ಗುರಿಯಾಗಿಟ್ಟುಕೊಂಡು ಅದನ್ನು ಹಾಸ್ಯಮಯವಾಗಿ ಪ್ರತಿಪಾದಿಸುವುದರಲ್ಲಿ ಅವರ ಕಥನಕೌಶಲವನ್ನು

ಕಾಣಬಹುದು. ಕೆಲವರಿಗೆ ಎಂತಹ ಗಂಭೀರ ಸನ್ನಿವೇಶದ ಕಥಾವಸ್ತುವಾದರೂ ನಕ್ಕು ನಗಿಸುವ ನಗೆಯನ್ನು ಕತೆಯಲ್ಲಿ ತುಂಬುವ ಕಲೆ ದೈವದತ್ತಾವಾಗಿ ಬಂದಿತ್ತು. ಉದಾಹರಣೆಗೆ ನಮ್ಮ ಶ್ರೀನಿವಾಸರನ್ನು ನಾವು ಇಂತಹ ಹಾಸ್ಯವನ್ನೊಳಗೊಂಡ ಕಥನಕೌಶಲಕ್ಕೆ ಹೆಸರಿಸಬಹುದು. ಹಾಗೆಯೇ ನಮ್ಮ ಕಡಲತೀರ ಭಾರ್ಗವ ಶಿವರಾಮಕಾರಂತರು ಏನು ಬರೆದರು ನಗೆಯನ್ನುಮರೆಯತಕ್ಕವರಲ್ಲ.

ಅವರ ಕಥೆಗಳಲ್ಲಿ ಹಾಸ್ಯವು ವ್ಯಕ್ತಿಗಳಲ್ಲಿರುವ ಕೊಳೆಯನ್ನು ತೊಳೆಯುವ ನಿರ್ಮಲ ಗಂಗೆಯಂತೆ ಕಥೆಗಳುದ್ದಕ್ಕೂ ಹರಿದುಬಂದಿದೆ. ಇವರು ವಿದ್ಯಾವಂತರ ಅಭಿರುಚಿಗೆ ತಕ್ಕಂತೆ ಅವರ ಕತೆಗಳಲ್ಲಿ ಹಾಸ್ಯವನ್ನು ತಂದಿದ್ದಾರೆ. ಕಾರಂತರ ದಾರಿಯಲ್ಲಿ ನಡೆದ ತೇಜಸ್ವಿಯವರು ತಮ್ಮ ಕಥೆಗಳನ್ನು ಬರೆಯಲಿಕ್ಕೆ ಸ್ಫೂರ್ತಿಯಾರೆಂದು ಹೀಗೆ ಹೇಳುತ್ತಾರೆ.

"ನನ್ನ ದೃಷ್ಟಿಯಲ್ಲಿ ಕುವೆಂಪು ಕನ್ನಡದ ಅತ್ಯುತ್ತಮ ಗದ್ಯಲೇಖಕ ಎನ್ನಿಸುತ್ತದೆ. ಅವರ ಗದ್ಯದಲ್ಲಿ ಕಲೆಗಾರಿಕೆ, ಹಾಸ್ಯಕಥನಕ್ರಮ, ನಾಟಕೀಯ ಸನ್ನಿವೇಶಗಳ ಚಿತ್ರಣ ಮೊದಲಾದವುಗಳಿಂದ ನಾನು ತುಂಬಾ ಪ್ರಭಾವಿತನಾಗಿದ್ದೇನೆ. ನಾನು ಬರೆಯಲು ಆರಂಭಿಸಿದಾಗ ಇದ್ದ ಸಮಸ್ಯೆ ಕುವೆಂಪು ಹಾಗೂ ಕಾರಂತರ ಪ್ರಭಾವದಿಂದ ಪಾರಾಗುವುದೇ ಹೊರತು ಸಿಕ್ಕಿಕೊಳ್ಳುವುದಲ್ಲ" ಹೀಗೆ ಕುವೆಂಪು ಕಾರಂತರ ಕಥನ ಕ್ರಮಗಳನ್ನು ಮೆಚ್ಚುತ್ತೇನೆ ಹಾಗೂ ಅವರು ಹಾಕಿಕೊಟ್ಟ ದಾರಿಯಲ್ಲಿ ಹೊಸದನ್ನು ಸೃಷ್ಟಿಸುವುದೇ ಎನ್ನ ಗುರಿ ಎನ್ನುವುದು ಇಂದಿನ ಸೃಜನಶೀಲ ಸಾಹಿತ್ಯ ಸೃಷ್ಟಿಗೆ ಕಾರಣವಾಗಿದೆ.

ತೇಜಸ್ವಿಯವರ ಕಥೆಗಳ ಕಾರ್ಯವ್ಯಾಪ್ತಿಗೆ ಅನೇಕ ಸಂಕೀರ್ಣಮುಖಗಳಿವೆ. ಓದುಗರ ಮನರಂಜನೆಯಿಂದ ಹಿಡಿದು ಸಾಂಸ್ಕೃತಿಕ ಅಭಿರುಚಿಗಳನ್ನು ತಿದ್ದುವುದರ ಅನೇಕ ರೀತಿಯಲ್ಲಿ ಅವರ ಕಥೆಗಳು ಕ್ರಿಯಾಶೀಲವಾಗುತ್ತದೆ. ಅವರ ಪರಿಸರದ ಕಥೆಗಳಲ್ಲಿ ಒಂದಾದ 'ಮಾನೀಟರ್' ಎಂಬ ಕತೆಯಲ್ಲಿ ಓತಿಕ್ಯಾತವನ್ನು ಹಿಡಿಯಲು ಹೋಗಿ ಮರಕ್ಕೆ ನೇತುಬಿದ್ದು ಕೊನೆಗೆ ಮರವೇ ಬಿದ್ದು ಎಲ್ಲರಿಗೂ ಗಾಯಗಳಾಗುತ್ತವೆ. ಇಂತಹ ಪರಿಸರ ಅಲ್ಲಿನ ಪ್ರಾಣಿಗಳನ್ನು ಕುರಿತು ಹೇಳುವಾಗ ಅದನ್ನು ವೈಜ್ಞಾನಿಕವಾಗಿ ಹೇಳದೇ ಸರಳ ಸಂಭಾಷಣೆ ಹಾಗೂ ಅವರ ವೈಚಾರಿಕ ನಿಲುವುಗಳನ್ನು ಪ್ರತಿಪಾದಿಸುವುದಕ್ಕೆ ಅಲ್ಲಲ್ಲಿ ಹಾಸ್ಯಮಯ ಸನ್ನಿವೇಶಗಳು ಕಥೆಗೆ ತಕ್ಕಂತೆ ರೂಪಿತವಾಗಿದೆ. ಇಲ್ಲಿ ಮಾರ ಹೇಳುವಂತಹ ಮೂಢನಂಬಿಕೆಯ ವಿಚಾರಗಳನ್ನು ಹೇಳುತ್ತಾ ಅದಕ್ಕೆ ನಮ್ಮದೆ ವಿಚಾರಗಳನ್ನು ಓದುಗರ ಮುಂದಿಡುತ್ತಾರೆ. 'ಕಿವಿಯೊಡನೆ ಒಂದು ದಿನ' ಎಂಬ ಕಥೆಯಲ್ಲಿ ಮೂಕ ಪ್ರಾಣಿಗಳ ವ್ಯಕ್ತಿತ್ವವನ್ನು ಕಟ್ಟಿಕೊಡುವಲ್ಲಿ ಹಾಸ್ಯವನ್ನು ತೇಜಸ್ವಿಯವರು ಬಳಸಿಕೊಂಡಿದ್ದಾರೆ. 'ಮಾಸ್ತಿ ಮತ್ತು ಭೈರ' ಎಂಬ ಕಥೆಯಲ್ಲಿ ತೇಜಸ್ವಿಯವರು ಮಾಸ್ತಿ ಮತ್ತು ಭೈರನ ಸಂಸ್ಕೃತಿ, ವ್ಯಕ್ತಿತ್ವ, ಸ್ವರೂಪವನ್ನು ಕಟ್ಟಿಕೊಡುತ್ತಾ ಅದನ್ನು ಅವರ ಭಾಷಾವೈಖರಿಯ ಮೂಲಕ ಹಾಸ್ಯಮಯವಾಗಿ ಕಟ್ಟಿಕೊಡುತ್ತಾರೆ. ಇಲ್ಲಿ ನಿರೂಪಕ ಮೂಲ ಉದ್ದೇಶ ಒಂದು ವಿಚಿತ್ರ ಸಂಸ್ಕೃತಿಯ ಚಹರೆಗಳಾದ ಮಾಸ್ತಿ ಮತ್ತು ಭೈರನ ವ್ಯಕ್ತಿತ್ವವನ್ನು ತಮ್ಮ ವೈಚಾರಿಕ ನಿಲುವುಗಳ ಮೂಲಕ ಕಟ್ಟಿಕೊಡುತ್ತಾ, ಅದನ್ನು ಹಾಸ್ಯದ ಮೂಲಕ ಪ್ರತಿಬಿಂಬಿಸುವುದಾಗಿದೆ.

ಅವರ 'ಸುಸ್ಮಿತ ಮತ್ತು ಹಕ್ಕಿಮರಿ' ಹಕ್ಕಿಗಳ ಸಾಕಾಣಿಕೆ ಎಷ್ಟು ಕಷ್ಟ ಹಾಗೂ ಅದರೊಂದಿಗೆ ಅವುಗಳ ಬದುಕಿನ ವೈಖರಿಯನ್ನು ತಿಳಿಹಾಸ್ಯದ ಮೂಲಕ ಓದುಗರ ಮುಂದಿಡುತ್ತಾರೆ. ಹಾಗೆಯೇ ಅವರ 'ಎಂಗ್ಟನ ಪುಂಗಿ', 'ಕಾಳಪ್ಪನ ಕೋಬ್ರ', 'ಮೂಲಿಕೆ ಬಳ್ಳಿಯ ಸುತ್ತ' ಈ ಎಲ್ಲಾ ಕತೆಗಳು ಲೇಖಕರ ವೈಚಾರಿಕ ನಿಲುವುಗಳನ್ನು ಪ್ರತಿಬಿಂಬಿಸಲು ಅದರ ಜೊತೆ ಹಾಸ್ಯಮಯ ಸಂಭಾಷಣೆ ಬಳಸಿಕೊಂಡಿದ್ದಾರೆ.

ಅವರ ಕಥೆಗಳೆಲ್ಲವೂ ಶೋಧನಾತ್ಮಕವಾದವು. ಯಾವುದನ್ನು ಸೃಷ್ಟಿಯ ರಹಸ್ಯ ಎಂದು ಎಲ್ಲರೂ ಭಾವಿಸುತ್ತಾರೋ ಅದನ್ನು ತಮ್ಮ ವೈಚಾರಿಕ ನೆಲೆಗಳ ಮೂಲಕ ಶೋಧನೆಗೆ ಒಳಪಡಿಸಿ ಓದುಗನಿಗೆ ಹೊಸಪ್ರಪಂಚ ಕಟ್ಟಿಕೊಡುವುದು. ಹೀಗೆ ಕಟ್ಟಿಕೊಡುವಾಗ ಅದನ್ನು ಹಾಸ್ಯವನ್ನು ತಂದು ತಿಳಿಸುವಂತದ್ದು. ಅವರ 'ರಹಸ್ಯವಿಶ್ವ' ಕಥೆಯಲ್ಲಿ ಕೇಂದ್ರ ಪಾತ್ರ ಓರ್ವ ಸಣ್ಣ ಬಾಲಕ. ಇವನು ಸೈಕಲ್ ಕಲಿಯುವ ಭರದಲ್ಲಿ 'ರಾಕ್ಷಸಿ'ಯಂತೆ ಕಾಣುತ್ತಿದ್ದ ಬೃಹತ್ಕಾಯದ ರಂಗಮ್ಮ ಎಂಬ ಹೆಂಗಸಿಗೆ ಡಿಕ್ಕಿ ಹೊಡೆಯುತ್ತಾನೆ. ಅವಳ ಬಗ್ಗೆ ತನ್ನ ಮನೆಯ ಅಮ್ಮಂದಿರೆಲ್ಲಾ ಪಿಸುಮಾತಿನಲ್ಲಿ ಏನೇನೋ ಮಾತಾಡಿಕೊಳ್ಳುತ್ತಿದ್ದುದನ್ನು ಕೇಳಿ ಅದೇನೆಂದು ಅರ್ಥವಾಗಿರದಿದ್ದರೂ ಒಟ್ಟಿನಲ್ಲಿ ಅವಳೊಬ್ಬಳು ದುಷ್ಟ ಹೆಂಗಸಿರಬಹುದೆಂಬ ಅಸ್ಪಷ್ಟ ಕಲ್ಪನೆಯನ್ನು ಈ ಹುಡುಗ ಮನಸ್ಸಿನಲ್ಲಿ ಮೂಡಿಸಿಕೊಂಡಿರುತ್ತಾನೆ. ಈಗ ಅವಳಿಗೆ ಸೈಕಲ್ ಡಿಕ್ಕಿ ಹೊಡೆಸಿ ಅವಳ ಸೀರೆಯೊಳಗೆ ತೂರಿಕೊಂಡು ಬಿಟ್ಟಿರುತ್ತಾನೆ. ತಾನು ಸತ್ತೆ ಹೋದೆ ಎಂದು ಭಾವಿಸಿಕೊಳ್ಳುತ್ತಾನೆ, ಏನಾಗುತ್ತಿದೆ ಎಂದು ಅವನಿಗೆ ಗೊತ್ತಾಗುವಷ್ಟರಲ್ಲಿ 'ಕೆಳಗೆ ಉರುಳಿದ್ದ ಸೀರೆ ಒಳಗೆ ತಲೆ ಎತ್ತುತ್ತಾ ಇದ್ದ ನನ್ನನ್ನು ಹುಳುಕೊಡವಿದಂತೆ ಸೀರೆ ಕೊಡವಿ ಕಾಲಿನಿಂದ ಆಚೆ ತಳ್ಳಿದ್ದಳು. ನಾನು ಪರಲೋಕ ಅಂತ ತಿಳಿದಿದ್ದ ಅವಳ ಸೀರೆ ಸುರುಳಿಯ ಒಳಭಾಗ ಎಂದು ಆಗಲೇ ನನಗೆ ಗೊತ್ತಾಗಿದ್ದು! ರಂಗಮ್ಮ ಸತ್ತ ಇಲಿಯ ಬಾಲ ಹಿಡಿದು ಎತ್ತುವಂತೆ ನನ್ನನ್ನು ಹಿಡಿದೆತ್ತಿ. ನಾನು ನಿಂತ ಕೂಡಲೇ ಜುಟ್ಟುಬಿಟ್ಟು ಬುರುಡೆ ಮೇಲೆ ನಾಲ್ಕು ತಪರಾಕಿ ತಟ್ಟಿದಳು. ಮುಂದೆ ಪರಿಪರಿಯಾಗಿ ರಂಗಮ್ಮ ಹುಡುಗನನ್ನು ಬಯ್ಯುವುದು, ಅವನು ಕಂಡು ಕೇಳಿರದ ಹೊಸ ಹೊಸ ಶಿಕ್ಷೆಯ ಸಾಧ್ಯತೆಗಳಿಂದ ಅವನನ್ನು ಹೆದರಿಸಿ ಬೆದರಿಸಿ ದಿಗ್ಭ್ರಾಂತನನ್ನಾಗಿ ಮಾಡುವ ವಿವರಗಳನ್ನು ತೇಜಸ್ವಿ-ಕಥನ ಹಾಸ್ಯ ಸನ್ನಿವೇಶಗಳನ್ನು ಓದಿಯೇ ಸವಿಯಬೇಕು. ಅವರು ಆ ಚಿಕ್ಕ ಹುಡುಗನ ರಹಸ್ಯ ವಿಶ್ವವನ್ನು ಓದುಗರ ಮುಂದೆ ವಿವರಿಸುವ ಪರಿ ಇದು ಎಂದೇ ಹೇಳಬೇಕು.

ನಾನು ಸುಮ್ಮನೆ ನಿಂತೇ ಇದ್ದೆ, ಯಾರಿಗೂ ಹೇಳಲಾಗದ ನನಗೆ ನಾನೇ ಹೇಳಿಕೊಳ್ಳಬಹುದಾದ ರಹಸ್ಯವಿಶ್ವ ಒಂದು ಅಂದಿನಿಂದ ನನ್ನೊಳಗೆ ರೂಪುಗೊಳ್ಳತೊಡಗಿತು. ವ್ಯಾಖ್ಯಾನ-ವಿಮರ್ಶೆ, ವಿಶ್ಲೇಷಣೆಗಿರಲಿ ಸುಲಭ ಸರಳ ಸಂಗ್ರಹಕ್ಕಾಗಲೀ ಸಾರಾಂಶ-ತಾತ್ಪರ್ಯಗಳಿಗೂ ಸಿಗದ ಅನುಭವಕ್ಕೆ ಮಾತ್ರ ದಕ್ಕಬಲ್ಲ ಈ ಹೊಸ ಬಗೆಯ ಕತೆಗಳಿಂದಾಗಿ ತೇಜಸ್ವಿಯವರ ಮುಂದಿನ ಬರವಣಿಗೆಯ ಬಗ್ಗೆ ಓದುಗ ಇನ್ನಷ್ಟು ಕುತೂಹಲ ತಾಳುವಂತೆ ಮೂಡುತ್ತವೆ.

ಸೂಕ್ಷ್ಮವಾಗಿ ಗಮನಿಸಿದಾಗ ಕನ್ನಡ ಸಾಹಿತ್ಯದ ಸಾಮಾನ್ಯ, ಪ್ರಧಾನವಸ್ತು ಇಲ್ಲಿಯೂ ಬೇರೆ ಬೇರೆ ವಿವರಗಳಲ್ಲಿ ನಿರ್ವಹಣೆಗೆ ಒಳಗಾಗುತ್ತಿರುವುದು ನಮ್ಮ ಕಣ್ಣು ತಪ್ಪಿಸಿಕೊಳ್ಳುವುದಿಲ್ಲ. ವಸಾಹತುಶಾಹಿ ಆಡಳಿತ, ಹೊಸ ಶಿಕ್ಷಣ ವ್ಯವಸ್ಥೆ, ಹೊಸ ಮೌಲ್ಯಗಳ, ಸಂಸ್ಥೆಗಳ ವಸ್ತುಗಳ ಆಗಮನ, ಹಳತು-ಹೊಸತುಗಳ ಮುಖಾಮುಖಿ ಇವೆಲ್ಲವುಗಳಿಂದಾಗಿ ಇತಿಹಾಸದ ಪಯಣದ ಹೆಜ್ಜೆ ಗುರುತುಗಳನ್ನು ಗುರುತಿಸಿ ಭವಿಷ್ಯ ಎತ್ತಸಾಗಿದೆ ಎಂಬ ಮುನ್ನೋಟವನ್ನು ಹಾಯಿಸುವುದು ತೃತೀಯ ಜಗತ್ತಿನ ಆಧುನಿಕ ವಾಸ್ತವದಿಂದ ಸಾಹಿತ್ಯದ ಮುಖ್ಯ ಹಂಬಲವಷ್ಟೇ. ಮಾಸ್ತಿ, ಕಾರಂತ, ಕುವೆಂಪು, ಆಲನಹಳ್ಳಿಕೃಷ್ಣ, ದೇವನೂರು ಮಹಾದೇವ, ಲಂಕೇಶ್, ಅನಂತಮೂರ್ತಿಯಿವರ ಕೃತಿಗಳನ್ನು ಗಮನಿಸಿದರೂ ಈ ಅಂಶ ಎಲ್ಲರಲ್ಲೂ ಸಾಮಾನ್ಯವಾಗಿ ಕಾಣುವಂತಹುದು.

ದೇವನೂರರ 'ಡಾಂಬರರು ಬಂದುದು', ವೈದೇಹಿ ಅವರ 'ಗುಲಾಬಿ ಟಾಕೀಸು' ಮತ್ತು 'ಸಣ್ಣ ಅಲೆಗಳು' ಆಲನಹಳ್ಳಿಕೃಷ್ಣರ 'ಪರಸಂಗದ ಗೆಂಡತಿಮ್ಮ' ಮುಂತಾದ ಹಲವು ಕತೆ, ಕಾದಂಬರಿಗಳು 'ಅಬಚೂರಿನ ಪೋಸ್ಟಾಫೀಸು' 'ತುಕ್ಕೋಜಿ'ಯಂಥ ಕತೆಗಳೊಂದಿಗೆ ನೇರ ಸಂಬಂಧವನ್ನೇ ಹೊಂದಿದಂತೆ ಕಾಣುತ್ತವೆ. ತೇಜಸ್ವಿ ಆಧುನಿಕ ಕನ್ನಡ ವಾಸ್ತವವಾದಿ ಮಾರ್ಗದ ಪ್ರಧಾನ ಧಾರೆಯೊಂದಿಗೆ ಸೇರಿಕೊಳ್ಳುವುದು ಹೀಗೆ. ತುಕ್ಕೋಜಿ ಕತೆ ಬದಲಾದ ಸಂದರ್ಭದಲ್ಲಿ ತುಕ್ಕೋಜಿಯ ಉತ್ಕರ್ಷದ ಕತೆಯನ್ನು ಅನೇಕ ಸ್ವಾರಸ್ಯಕರ ವಿವರಗಳಲ್ಲಿ ತಿಳಿಹಾಸ್ಯ ಲೇಪನದ ಮೂಲಕ ನಿರೂಪಿಸುತ್ತಾ ಹೋಗುತ್ತದೆ. 'ಅಬಚೂರಿನ ಪೋಸ್ಟಾಫೀಸು' ಕತೆಗಳಲ್ಲಿ ವಾಸ್ತವವಾದಿ ಕ್ರಮವನ್ನು ತೇಜಸ್ವಿ ಪ್ರಧಾನವಾಗಿ ಅನುಸರಿಸಿದರೂ ವಾಸ್ತವವಾದ ತೇಜಸ್ವಿ ಮನೋಧರ್ಮಕ್ಕೆ ಒಂದು ಕಟ್ಟುಪಾಡನ್ನು ಹಾಕಿಬಿಡುವುದಿಲ್ಲ ಎಂಬುದನ್ನು ನಾವು ಮರೆಯಬಾರದು. ಲೌಕಿಕ ವಿವರಗಳನ್ನು ಅಲೌಕಿಕದ ಎತ್ತರಕ್ಕೆ ಒಯ್ಯುವ ಭೌತ ವಿವರಗಳನ್ನೇ ರೂಪಕದ ಮಟ್ಟಕ್ಕೇರಿಸುವ ಮಹತ್ವಾಕಾಂಕ್ಷಿ ತೇಜಸ್ವಿಯವರ ಸಮಗ್ರ ವಾಙ್ಮಯದ ಒಂದು ಪ್ರಮುಖ ಲಕ್ಷಣವಾಗಿದೆ. ತೇಜಸ್ವಿಯವರು ಎಂಥಹ ಜಟಿಲ ವಿಷಯಗಳನ್ನು ತಾತ್ವಿಕ ವಿಷಯಗಳನ್ನು ಅವರು ಜಿಡುಕಿಲ್ಲದೆ ನಿರೂಪಿಸುವುದ ಅವರ ಹಾಸ್ಯಮಯ ಸನ್ನಿವೇಶದ ನಿರೂಪಣೆಯಿಂದ, ವಿಜ್ಞಾನದ ವಿಷಯಗಳ ಬಗ್ಗೆ ಇವರಷ್ಟು ಸರಳವಾಗಿ ತಿಳಿಯಾಗಿ ಬರೆಯುವವರು ಕನ್ನಡದಲ್ಲಿ ತೀರಾ ವಿರಳ. ಇಂತಹ ವಿಷಯಗಳನ್ನು ಪರಿಸರದ ಕತೆಗಳ ನಿರೂಪಣೆಯ ವಿಧಾನದಿಂದ ನಾವು ಅರಿಯಬಹುದಾಗಿದೆ. ತೇಜಸ್ವಿಯವರ ಲವಲವಿಕೆಯ ಬರವಣಿಗೆ ಅವರ ವೈವಿಧ್ಯಮಯ ಸಮೃದ್ಧ ಬದುಕಿನಷ್ಟೇ ಸಮೃದ್ಧ. ಪ್ರಾಯಶಃ ಶಿವರಾಮ ಕಾರಂತರನ್ನು ಬಿಟ್ಟರೆ ತೇಜಸ್ವಿಯೊಬ್ಬರೆ ಪ್ರಮುಖವಾಗಿ ಸಾಹಿತ್ಯೇತರ ಚಟುವಟಿಕೆಗಳ ಬಗ್ಗೆಯೂ ಅಷ್ಟೊಂದು ತೀವ್ರವಾದ ಆಸಕ್ತಿ ಇಟ್ಟುಕೊಂಡಿರುವುದು. ಕಥೆಗಳನ್ನು ಬರೆಯುವಷ್ಟೇ ತನ್ಮಯತೆಯಿಂದ ಅವರು ಹಕ್ಕಿಗಳ ಬಗ್ಗೆ, ಕೃಷಿಯ ಬಗ್ಗೆ, ಹಾರಾಡುವ ತಟ್ಟೆಗಳ ಬಗ್ಗೆ, ಬಣ್ಣ ಬಣ್ಣದ ಮೀನುಗಳ ಬಗ್ಗೆ ಬರೆಯಬಲ್ಲರು.

ಇದನ್ನು ನಾವು ಅವರ ಪರಿಸರದ ಕತೆಗಳಲ್ಲಿ ಕಾಣಬಹುದಾಗಿದೆ. ಅವರು ಮೂಢನಂಬಿಕೆಯ ವಿರುದ್ಧ ತಮ್ಮ ನಿಷ್ಠುರ ವಿಚಾರಧಾರೆಗಳನ್ನು ವಿನೋದಾತ್ಮಕವಾಗಿ ಚಿತ್ರಿಸುತ್ತಾರೆ. ಈ ದೃಷ್ಟಿಯಿಂದ 'ಪರಿಸರದ ಕತೆ' ಪುಸ್ತಕದ ಮೊದಲನೆಯ ಅಧ್ಯಾಯ 'ಪರಿಸರದ ಕತೆ' ತೇಜಸ್ವಿಯ ಮನೋಧರ್ಮದಲ್ಲಾದ ಪಲ್ಲಟಗಳ ಬಗ್ಗೆ ಕೆಲವು ಮಹತ್ವಪೂರ್ಣ ಸೂಚನೆಗಳನ್ನು ನೀಡುತ್ತದೆ. ಏಕೆಂದರೆ ಸ್ವತಃ ತೇಜಸ್ವಿ 'ಸ್ವಸ್ಥ' 'ಸಭ್ಯ' ನಾಗರೀಕ, ವಿದ್ಯಾವಂತ. ಸಮಾಜದ ನಿರೀಕ್ಷೆಗಳಿಗೆ ಹೊರತಾದ ಜೀವನಶೈಲಿಯೊಂದನ್ನು ರೂಪಿಸಿಕೊಳ್ಳುತ್ತ ಹಲವರಿಂದ ದೂಷಿಸಿಕೊಂಡಿದ್ದರು. ನಾನು ತೋಟ ಮಾಡಲು ಆರಂಭಿಸಿದ ಮೊದಲ ವರ್ಷಗಳಲ್ಲಿ ಕೋವಿ ಹೆಲ ಮೇಲೆ ಹಾಕಿಕೊಂಡು ದಿನವಿಡೀ ಅದರೊಡನೆ ಕಾಡು ಅಲೆಯುವುದೇ ಕೆಲಸವಾಗಿತ್ತು. ಹೀಗೆ ಓದುವುದ, ಬರೆಯುವುದು ಎಲ್ಲದಕ್ಕೂ ತಿಲಾಂಜಲಿ ಕೊಟ್ಟು ನಿರ್ಜನ ಕಾಡುಗಳಲ್ಲಿ ಗೊತ್ತು ಗುರಿಯಿಲ್ಲದೆ ಅಲೆಯುತ್ತಿರುವ ನನ್ನನ್ನು ನೋಡಿ 'ಇವನು ಸಂಪೂರ್ಣ ಹಾಳಾದನೆಂದು ವ್ಯಸನ ಸೂಚಿಸಿದವರೂ ಅನೇಕರಿದ್ದಾರೆ. 'ಎಂಥವರಿಗೆ ಎಂಥಾ ಮಗ' ಎಂದು ವಿಷಾದ ಪಟ್ಟವರೂ ಅನೇಕರಿದ್ದಾರೆ. ಕಲಿಯುವಿಕೆಯ ಇನ್ನೊಂದು ಇತ್ಯಾತ್ಮಕ ಮಾರ್ಗ ಇದು. ಅಥವಾ ಹಿಂದೆ ಬಲವಂತವಾಗಿ, ಸಂಪ್ರದಾಯಿಕವಾಗಿ 'ಕಲಿತದ್ದರಿಂದ' ಬಿಡುಗಡೆ ಪಡೆಯುವ ಮಾರ್ಗವೂ ಹೌದು. ಹೊಸ ಅರಿವಿಗೆ ಮುನ್ನ ಹಳೆಯ ಬೇಡದ ಸರಕು-ಸಂಗ್ರಹಗಳನ್ನು ಕೊಡವಿ ಕೊಳ್ಳುವ ಕ್ರಿಯೆ ಇದು.

ತೇಜಸ್ವಿಯವರ ಕತೆಗಳಲ್ಲಿ ಹಾಸ್ಯ ಎಂಬುದು ಬರುವುದು ಅವರ ಶೋಧನಾತ್ಮಕ ವೈಚಾರ ಗುಣವಂತಿಕೆ ಹಾಗೂ ಸಾಮಾಜಿಕ ಗೊಡ್ಡು ಸಂಪ್ರದಾಯಗಳ ವಿಡಂಬನೆಯಾಗಿ, ಯಾವುದೇ ಮನುಷ್ಯನಿಗೆ ಮನರಂಜನೆ ಎಷ್ಟು ಮುಖ್ಯವಾಗುತ್ತೆ ಎಂತಹ ಸಂದರ್ಭವನ್ನು ಅವರು ವರ್ಣಿಸುವ ವಿಶ್ಲೇಷಿಸುವ ಲೇವಡಿ ಮಾಡುವ ಹಾಸ್ಯ ಸನ್ನಿವೇಶಗಳಿಂದ ನಮಗೆ ತಿಳಿದು ಬರುತ್ತವೆ. ಉದಾಹರಣೆಗೆ 'ತಬರನಕತೆ'ಯಲ್ಲಿ ತಬರ, ಕೆಟ್ಟ ಹುಚ್ಚನ್ನು ತೇಜಸ್ವಿ ವರ್ಣಿಸುವ ರೀತಿಯನ್ನು ಗಮನಿಸಬಹುದು. ಪಡುಗೆರೆಯ ಜನ ತಬರನಿಗೂ ಹುಚ್ಚು ಹಿಡಿಯಿತೆಂದು ನಿರ್ಧರಿಸಲು ಕಾತರರಾಗಿದ್ದಾರೆ. ಏಕೆಂದರೆ ಅನಂತರ ಅವನ ಸಮಸ್ಯೆಗಳು ಬೇರೊಂದು ಪ್ರಪಂಚಕ್ಕೆ ಸೇರಿದವಾಗುತ್ತದೆಂದು. ಪಡುಗೆರೆಯಲ್ಲಿ ಯಾರಾದರೂ ಹುಚ್ಚರಾದರೆ ಯಾರು ಅಪ್ರತಿಭರಾಗುತ್ತಿರಲಿಲ್ಲ. ಯಾಕೆಂದರೆ, ಈ ಹುಚ್ಚರು ಇದ್ದಕ್ಕಿದ್ದಂತೆ ತಲೆಕೆಟ್ಟು ಒಂದು ದಿನ ಹುಚ್ಚರಾಗುತ್ತಿರಲಿಲ್ಲ. ಇವರೆಲ್ಲ ಅತ್ಯಂತ ಸ್ವಾಭಾವಿಕವಾಗಿಯೂ, ಕ್ರಮೇಣವಾಗಿಯೂ ಹುಚ್ಚರಾಗುತ್ತಿದ್ದರು. ಆನ ಇವರ ಹುಚ್ಚನ್ನು ನಿರೀಕ್ಷಿಸಿ ಹುಚ್ಚರಾದ ನಂತರ 'ಅಯ್ಯೋ' ಪಾಪ ಎಂದು ಕರುಣೆ ತೋರಿ ಸಮಾಜದ ಸ್ವೀಕೃತ ಸ್ಥಿತಿಯಾಗಿ ಒಪ್ಪಿಕೊಂಡು ಬಿಟ್ಟಿದ್ದರು. ಒಟ್ಟಿನಲ್ಲಿ ಈ ಹುಚ್ಚರಿಗೆ ಒಂದು ಚರಿತ್ರೆಯೇ ಇರುತ್ತಿದ್ದಿತು.

ಸೂಕ್ಷ್ಮವಾಗಿ ನೋಡಿದರೆ ತೇಜಸ್ವಿಯವರ ಅನೇಕ ಮುಖ್ಯಪಾತ್ರಗಳು ಇಂಥ 'ಹುಚ್ಚರೆ' ತಲೆಕೆಟ್ಟವರೆ. ಇಂತಹವರ ಮೂಲಕ ಇವರು ಹಾಸ್ಯವನ್ನು ಪ್ರತಿಬಿಂಬಿಸುವುದು. ಉದಾಹರಣೆಗೆ ಬೋಬಣ್ಣ, ಮಂದಣ್ಣ, ಎಂಗ್ಟ, ಕರಿಯಪ್ಪ, ಕಾಳಪ್ಪ, ಕರ್ವಾಲೋ, ಗೌರಿ, ಸುರೇಶ, ಪ್ಯಾರ, ಪ್ರಾಣಿಗಳಾದ

ಕಿವಿ, ಮೇಲ್ನೋಟಕ್ಕೆ ವಿಲಕ್ಷಣವೆಂದೂ, ವಿಲಕ್ಷಣರೆಂದು ಕಾಣಿಸುವ ಘಟನೆಗಳ ಮತ್ತು ಪಾತ್ರಗಳ ಮೂಲಕ ತೇಜಸ್ವಿ ಕಾಣಿಸುವ ಸತ್ಯಗಳು ಮಾತ್ರ ಅದ್ಭುತವಾದದ್ದು. ಅಂದರೆ ಮೇಲುನೋಟಕ್ಕೆ ಅಪರಿಚಿತವು, ಅನೂಹ್ಯವೂ, ಅಸ್ಪಷ್ಟವೂ, ಅಸಂಬದ್ಧವೂ ಆದ ಮನುಷ್ಯನ ಅವಸ್ಥೆಯನ್ನು ಹೇಳಲು ಇವರು ಹಾಸ್ಯವನ್ನು ಬಳಸಿಕೊಂಡಿದ್ದಾರೆ.

ತೇಜಸ್ವಿ ವರ್ಣಿಸುವ ವಿದ್ಯಮಾನಗಳು ಏಕಕಾಲದಲ್ಲಿ ನಿರ್ದಿಷ್ಟ ಐತಿಹಾಸಿಕ ಸಂದರ್ಭಗಳಾಗಿಯೂ, ಮಾನವೇತಿಹಾಸಕ್ಕೆ ಅತೀತವಾದ ಸೃಷ್ಟಿಯಲೀಲೆಗಳಾಗಿಯೂ ಕಾಣುತ್ತದೆ. ಹೀಗೆ ಜೀವನವನ್ನು ಒಂದು ಲೀಲೆಯಾಗಿ ಪರಿಭಾವಿಸುವ ರೀತಿಯಿಂದಾಗಿ ಒಂದು ಬಗೆಯ ಕಾಮಿಕ್ ಧಾಟಿ ತೇಜಸ್ವಿ ಬರವಣಿಗೆಗೆ ತಾನಾಗಿ ಬಂದುಬಿಡುತ್ತದೆ. ಇದು ಒಟ್ಟಾರೆ ಜೀವನ ದೃಷ್ಟಿಗೆ ಸಂಬಂದಪಟ್ಟ ಮಾತು ಎಂಬುದನ್ನು ಒತ್ತಿ ಹೇಳಬೇಕಿಲ್ಲ.

ತೇಜಸ್ವಿಯವರು ತಮ್ಮ ಕಥೆಗಳನ್ನು ಹೆಣೆದಿರುವುದು ವಿಶ್ವದ ಜಡತ್ವವನ್ನು ಅದರ ರಹಸ್ಯದ ಆಳವನ್ನು ಓದುಗರಿಗೆ ಕಟ್ಟಿಕೊಡಲು ಕೇವಲ ಹಾಸ್ಯವನ್ನು ಸೃಷ್ಟಿಸುವುದು ತೇಜಸ್ವಿಯವರ ಉದ್ದೇಶವಲ್ಲ. ಅವರು ಹಾಸ್ಯ ಲೇಖಕರು ಅಲ್ಲ. ವೈನೋದಿಕ ದರ್ಶನದಲ್ಲಿ ಅವರು ಎಲ್ಲವನ್ನೂ ಪರಿಭಾವಿಸುವುದು. ಹಾಗಾಗಿ ಮನುಷ್ಯ ಸಂಬಂಧದ ಭೀಕರ, ಬೀಭತ್ಸ ಚಿತ್ರಗಳನ್ನು ಕಟ್ಟಿಕೊಡುವಾಗಲೂ ತೇಜಸ್ವಿ ಬರವಣಿಗೆ ಅತಿ ಭಾವುಕತೆಗೆ ಅಥವಾ ರಂಜಕತೆಗೆ ಎಡೆಮಾಡಿಕೊಡುವುದಿಲ್ಲ. ಅವರ ಕತೆಗಳು ನಮ್ಮನ್ನು ದುಃಖ ಅಥವಾ ಕರುಣೆಗಳಲ್ಲಿ ಅದ್ದಿ ತೆಗೆಯುವುದಿಲ್ಲ. ಬದಲಿಗೆ ನಾವು ಎಲ್ಲವನ್ನು ಒಂದು ವೈನೋದಿಕ ಅಂತರದಿಂದ ಕಾಣುವ ಹಾಗೆ ಮಾಡುತ್ತದೆ.

## ಅಡಿ ಟಿಪ್ಪಣಿ

೧. ಎಚ್.ಕೆ.ನಂಜುಂಡಸ್ವಾಮಿ : ನಗೆ ಗನ್ನಡಂ ಗೆಲ್ಗೆ, ಪುಟ-೧೩೯

೨. ಪೂರ್ಣಚಂದ್ರತೇಜಸ್ವಿ ; ವಿಮರ್ಶೆಯ ವಿಮರ್ಶೆ, ಪುಟ-೫೭

೩. ಪೂರ್ಣಚಂದ್ರ ತೇಜಸ್ವಿ : ಪರಿಸರದ ಕತೆಗಳು, ಪುಟ-೭೯

೪. ಪೂರ್ಣಚಂದ್ರ ತೇಜಸ್ವಿ : ಪರಿಸರದ ಕತೆಗಳು, ಪುಟ-೮೯

೫. ಪೂರ್ಣಚಂದ್ರ ತೇಜಸ್ವಿ : ಕಿರಿಗೂರಿನ ಗಯ್ಯಾಳಿಗಳು, ಪುಟ-೯೫

೬. ಪೂರ್ಣಚಂದ್ರ ತೇಜಸ್ವಿ : ಪರಿಸರದ ಕತೆಗಳು, ಪುಟ-೧೨೯

೭. ಪೂರ್ಣಚಂದ್ರ ತೇಜಸ್ವಿ : ಪರಿಸರದ ಕತೆಗಳು, ಪುಟ-೨೫

೮. ಪೂರ್ಣಚಂದ್ರ ತೇಜಸ್ವಿ : ಪಾಕಕ್ರಾಂತಿ, ಪುಟ-೧೧

೯. ಪೂರ್ಣಚಂದ್ರ ತೇಜಸ್ವಿ : ಹುಲಿಯೂರಿನ ಸರಹದ್ದು, ಮುನ್ನುಡಿ

# ಸಮಾರೋಪ

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಶ್ರೀ.ಕೆ.ಪಿ.ಪೂರ್ಣಚಂದ್ರತೇಜಸ್ವಿ ಅವರು ಮಹತ್ವದ ಲೇಖಕರಾಗಿ ನಮ್ಮ ಮುಂದೆ ನಿಲ್ಲುತ್ತಾರೆ. ಕವಿ, ನಾಟಕಕಾರ, ಅನುವಾದಕ, ಕಾದಂಬರಿಕಾರ, ಕಥೆಗಾರ, ಪರಿಸರವಿಜ್ಞಾನಿ, ಚಿಂತಕ, ಸಮಾಜಶಾಸ್ತ್ರಜ್ಞ ಹೀಗೆ ಹತ್ತು ಹಲವು ವಿಧದಲ್ಲಿ ಅವರ ವ್ಯಕ್ತಿತ್ವದ ಹರವು ವಿಸ್ತರಿಸಿಕೊಳ್ಳುತ್ತದೆ. ಪಂಡಿತ ಪುತ್ರರೆಲ್ಲ ಪಾಂಡಿತ್ಯವಂತರಾಗುವುದಿಲ್ಲ ಎಂದು ಹೇಳಲಾಗುತ್ತದೆ. ಆದರೆ ಇದಕ್ಕೆ ಅಪವಾದವೆನ್ನುವಂತೆ ತೇಜಸ್ವಿ ಮಹಾಕವಿಯ ಮಗನಾಗಿ ನಮ್ಮ ನಡುವಿನ ಮಹತ್ವದ ಲೇಖಕರಾಗಿ ಬೆಳೆದಿದ್ದಾರೆ. ಕುವೆಂಪು ಅವರ ಮುಂದುವರಿಕೆ ಎನ್ನುವಂತೆ ಇವರು ಬರಹ, ವಿಚಾರ, ಚಿಂತನೆಗಳನ್ನು ರೂಢಿಸಿಕೊಂಡಿದ್ದಾರೆ. ತೇಜಸ್ವಿಯವರು ಮಲೆನಾಡಿನ ಪರಿಸರದಿಂದ ಪ್ರಭಾವಿತರಾಗಿದ್ದಾರೆ. ಮಲೆಯ ಪ್ರಕೃತಿಪ್ರಿಯತೆಯನ್ನು ಬರೀ ಆರಾಧನೆ ಮಾಡದೆ ಅದರಲ್ಲಿನ ನಿಗೂಢ ಸತ್ಯಗಳ ಶೋಧನೆ ಮಾಡಿದ್ದಾರೆ. ವೈಜ್ಞಾನಿಕ ದೃಷ್ಟಿಕೋನದಿಂದ ಪ್ರಕೃತಿರಹಸ್ಯಗಳನ್ನು ಅನಾವರಣಗೊಳಿಸಿದ್ದಾರೆ.

ಸಾಮಾನ್ಯವಾಗಿ ಬಹಳ ಲೇಖಕರಲ್ಲಿ ಬದುಕು, ಚಿಂತನೆಗಳಿಗೆ ತುಂಬ ಅಂತರವಿರುತ್ತದೆ. ಇದಕ್ಕೆ ಅಪವಾದ ತೇಜಸ್ವಿಯವರು. ಶ್ರೇಷ್ಠ ಸಾಮಾಜಿಕ ಚಿಕಿತ್ಸಕರಾದ ತೇಜಸ್ವಿ ಸಮಾಜದ ಹತ್ತು ಹಲವು ರೋಗಗಳನ್ನು ಸಮರ್ಥವಾಗಿ ಗುರುತಿಸುತ್ತಾರೆ. ತಮ್ಮ ಕೃತಿಗಳಲ್ಲಿ ಮಲೆನಾಡಿನ ಜನರ ಬದುಕಿನ ಆರ್ಥಿಕ ಅಸಾಮಾನತೆಗಿಂತ ಸಾಂಸ್ಕೃತಿಕ ಅಸಾಮಾನತೆ ಚಿತ್ರಣಗಳನ್ನು ನೀಡುತ್ತಾರೆ. ಕಲಾತ್ಮಕ ಕಥೆಗಳನ್ನು ಕೊಡುಗೆಯಾಗಿ ನೀಡಿದ ಕೀರ್ತಿ ಇವರದು. ನವಿರಾದ ಹಾಸ್ಯಪ್ರಜ್ಞೆ, ವಿಸ್ಮಯಗಳ ಅನ್ವೇಷಣೆಗಳು ಅವರ ಎಲ್ಲಾ ಕೃತಿಗಳಲ್ಲಿ ಕಂಡುಬರುತ್ತದೆ. ಕಾರಂತರ ಪ್ರಯೋಗಶೀಲತೆ, ಕುವೆಂಪುರವರ ಕಲಾತ್ಮಕತೆ, ಲೋಹಿಯಾರವರ ವಿಚಾರಧಾರೆಗಳು, ಜೀವನಪ್ರೀತಿ, ಪ್ರಯೋಗಗಳು ತೇಜಸ್ವಿಯವರ ಬರವಣಿಗೆಯ ಪ್ರೇರಣೆಗಳಾಗಿವೆ ಎಂದು ಅವರೇ ಹೇಳಿಕೊಂಡಿದ್ದಾರೆ. ಕುವೆಂಪು ಅವರ ಭಾವನೆ ಹಾಗೂ ಕಾರಂತ ಶೋಧನಗಳ ಸಮರ್ಥ ಸಂಯೋಜನೆಗಳ ಅತ್ಯಂತ ಸಹಜವೆಂಬಂತೆ ಕ್ರಿಯೇಟಿವ್ ಆಗಿ ಹೊರಹೊಮ್ಮಿರುವ ಸೆನ್ಸಿಬಲ್ ಹಾಗೂ ಪ್ರಾಕ್ಟಿಕಲ್ ಹಾಗೂ ದಾರ್ಶನಿಕ ತೇಜಸ್ವಿ "ನಾನೇರಿದೆತ್ತರಕ್ಕೆ ಅವನೇರಬಲ್ಲನೇ" ಎಂದ ಕುವೆಂಪುರವರ ಮಾತಿಗೆ ಸಂವಾದಿಯಾಗಿ 'ನಾಂ ಮುಳುಗಿ ದಾಳಕ್ಕೆ ಕುವೆಂಪು ಮುಳುಗಬಲ್ಲರೇ" ಎಂಬುದು ಅವರ ಜ್ಞಾನದ ಆಳವನ್ನು ತೋರಿಸುತ್ತದೆ. ತೇಜಸ್ವಿಯವರು ತಮ್ಮ ಅನುಭವದಲ್ಲಿ ಕಂಡುಕೊಂಡ ವಸ್ತು ಹಾಗೂ ಘಟನೆಗಳನ್ನು ಕಥೆಯಾಗಿಸುವ ಪರಿ ಆಶ್ಚರ್ಯ ಹುಟ್ಟಿಸುತ್ತದೆ. ಪ್ರತಿಕಥೆಯಲ್ಲೂ ಕಂಡುಬರುವ ವರ್ತಮಾನದ ಆಗುಹೋಗುಗಳು ಕಥೆಗಳ ವಸ್ತು ಪಾತ್ರಗಳಾಗಿ ನಮ್ಮೊಳಗೆ ಒಂದು ರೀತಿಯ ವಿಶಿಷ್ಟ ಸಂವೇದನೆಯನ್ನೂ ಉಂಟುಮಾಡುತ್ತದೆ. ವಾಸ್ತವಿಕತೆ ಸಂವೇದನೆಯಾಗುವ ಪರಿ ತೇಜಸ್ವಿಯವರ ಕಥೆಗಳ ಸ್ಥಾಯಿಯಾಗಿದೆ. ಸೂಕ್ಷ್ಮವಾದ ರೀತಿಯಲ್ಲಿ ತಾವು

ಕಂಡುಕೊಂಡ ಸತ್ಯಾಸತ್ಯತೆಗಳನ್ನು ಚರ್ಚೆಯ ಓರೆಹಚ್ಚಿ ನೋಡಿ, ಕಥಾಹಂದರದಲ್ಲಿ ಹಾಸ್ಯಮಯ ಸನ್ನಿವೇಶಗಳ, ಸಂಭಾಷಣೆಗಳನ್ನು ತರುವ ಅದ್ಭುತ ಕಲಾರೀತಿ ಅವರಿಗೆ ಸಿದ್ಧಿಸಿದೆ. ಈಗಾಗಿ ಕನ್ನಡ ವಿಶಿಷ್ಟ ಕಥೆಗಾರರಾಗಿ ನಮ್ಮನ್ನು ತೇಜಸ್ವಿಯವರು ಆಕರ್ಷಿಸಿಸುತ್ತಾರೆ.

ತೇಜಸ್ವಿಯವರು ಎಂಥ ಗಂಭೀರ ಸಮಸ್ಯೆಗಳನ್ನೂ ನಿರೂಪಿಸುವ ಕ್ರಮ ಅತ್ಯಂತ ಜಾಣ್ಮೆಯಿಂದ ಕೂಡಿದ್ದು, ಭಾಷೆಯ ಬಳಕೆಯಲ್ಲಿ ಸೂಕ್ಷ್ಮತೆಯನ್ನು, ನವಿರಾದ ಹಾಸ್ಯವನ್ನು ಚಿಮ್ಮಿಸುವಲ್ಲಿ ಅವರ ಕಲಾತ್ಮಕ ಸೃಷ್ಟಿ ಹೊಸ ಆಯಾಮವನ್ನು ಪಡೆದುಕೊಂಡಿದೆ. ಅವರ ಕಥೆಗಳಲ್ಲಿ ನಾವು ಹೆಚ್ಚಾಗಿ ಕಾಣುವುದು ಶೋಧನಾತ್ಮಕ ಗುಣ ಹಾಗೂ ವೈಚಾರಿಕತೆ. ಸೃಷ್ಟಿಯ ಪ್ರತಿಯೊಂದು ವಸ್ತುವಿನ ನಿಗೂಢತೆಯನ್ನು ಅರಿಯುವುದು ಅವರ 'ಪರಿಸರ ಕಥೆ'ಗಳಲ್ಲಿ ನಾವು ಮುಖ್ಯವಾಗಿ ಕಂಡರೂ ಆ ನಿಗೂಢತೆಗೆ ತಾವು ಕಂಡುಕೊಂಡ ಮೂಢನಂಬಿಕೆಗಳ ಕಟ್ಟುಕತೆಗಳನ್ನು ನಿರೂಪಿಸುವ ಪಾತ್ರಗಳಾಗಿ ಮಾರ, ಪ್ಯಾರ, ತೇಜಸ್ವಿ ಕತೆಗಳಲ್ಲಿ ನಮಗೆ ಕಾಣಿಸುತ್ತಾರೆ. ಅವರ ಈ ಕಟ್ಟುಕತೆಗಳನ್ನೇ ತಮ್ಮ ವೈಚಾರಿಕ ನಿಲುವುಗಳ ಮೂಲಕ ತೇಜಸ್ವಿ ತಮ್ಮ ಅರ್ಥವಂತಿಕೆಯ ಪೂರ್ಣಪ್ರಜ್ಞೆಯನ್ನು ಹಾಸ್ಯದ ಮೂಲಕ ನಮ್ಮ ಮುಂದಿಡುತ್ತಾರೆ.

ಪ್ರಖರ ವಿಚಾರವಾದಿ ತೇಜಸ್ವಿ ಪುನರ್‌ಜನ್ಮ, ಜ್ಯೋತಿಷ್ಯ, ಮೂಢನಂಬಿಕೆಗಳ ವಿರುದ್ಧ ಸಾಹಿತ್ಯದ ಎಲ್ಲಾ ಸಾಧ್ಯತೆಗಳನ್ನೂ ಬಳಸಿದವರು. ಅಂತಹ ತೇಜಸ್ವಿ ತಮ್ಮದೊಂದು ಕವನಕ್ಕೆ 'ಇಲ್ಲದ ನಮ್ಮ ಪುನರ್ ಜನ್ಮಕ್ಕೆ' ಎಂಬ ಶೀರ್ಷಿಕೆ ಇಟ್ಟಿರುವುದನ್ನು ನಾವು ಇಲ್ಲಿ ಗಮನಿಸಬೇಕಾದ ಸಂಗತಿ. ತೇಜಸ್ವಿಯವರ ಕಥೆಗಳಲ್ಲಿ ಹಾಸ್ಯ ಕಥಾ ಸನ್ನಿವೇಶಕ್ಕೆ ತಕ್ಕಂತೆ ಬಂದಿದೆ. ಕಾರಂತರ ಕಥೆಗಳಲ್ಲಿ ಹಾಸ್ಯವೆಂಬುದು ವ್ಯಕ್ತಿಗಳಲ್ಲಿರುವ ಕೊಳೆಯನ್ನು ತೊಳೆಯುವ ನಿರ್ಮಲ ಗಂಗೆಯಂತೆ ಕಥೆಗಳುದ್ದಕ್ಕೂ ಬಂದರೆ ಅವರ ಪ್ರಭಾವಕ್ಕೊಳಗಾದ ತೇಜಸ್ವಿಯವರಲ್ಲಿ ಜಡ್ಡುಗಟ್ಟಿದ ಭಾರತೀಯ ಗ್ರಾಮೀಣ ಸಮಾಜದ ಮೂಢನಂಬಿಕೆಗಳ ಕಟ್ಟುಪಾಡುಗಳ ನಿರೂಪಣೆ ಸಹಿತ ಅದಕ್ಕೆ ವೈಚಾರಿಕೆ ನೆಲೆಗಳನ್ನು ಕೊಟ್ಟು ಆ ಸಮಸ್ಯೆಯನ್ನು ಸರಳವಾಗಿಸುವ ಪ್ರಕ್ರಿಯೆಯಾಗಿ ಕಂಡುಬರುತ್ತದೆ. ಅವರ ಹಾಸ್ಯ ಹೆಚ್ಚು ವಿಡಂಬನಾತ್ಮಕವಾದದ್ದು. ಈ ವಿಡಂಬನೆಯ ಕ್ರಮ ನಮಗೆ ಒಂದು ಸಂಸ್ಕೃತಿಯ ಅನಾಗರೀಕತೆಯ ಪಳೆಯುಳಿಕೆಗಳಾಗಿ ಕಾಣುತ್ತವೆ. ತೇಜಸ್ವಿಯವರ ಹಾಸ್ಯಮಯ ವಿಡಂಬನೆ ಅವರ ಕಥೆಗಳಿಂದ 'ಮಾಸ್ತಿ ಮತ್ತು ಭೈರ'ನನ್ನು ನಿರೂಪಿಸುವ ಕ್ರಮದಲ್ಲಿ ಕಾಣಬಹುದು. ಅವರು ತಮ್ಮ ಕತೆಗಳಲ್ಲಿ ವ್ಯಕ್ತಿಗಳನ್ನು ಕಾಟಚಾರಕ್ಕೆ ವಿಡಂಬನೆ ಮಾಡುವುದಿಲ್ಲ.

ಅದರ ಫಲವಾಗಿ ನಮ್ಮ ಹಿಂದಿನ ವಿಚಿತ್ರ ಸಂಸ್ಕೃತಿಗಳನ್ನು ಕಟ್ಟಿಕೊಡುತ್ತಾರೆ. ತೇಜಸ್ವಿಯವರು ತಮ್ಮ ಕತೆಗಳಲ್ಲಿ ಹಾಸ್ಯವನ್ನು ತಂದಿರುವುದು ವೈಜ್ಞಾನಿಕ ದೃಷ್ಟಿಯಿಂದ ಮನರಂಜನೆಗೆ ಎಂದೆನಿಸಿದರು ಅವರ ಆ ಹಾಸ್ಯಮಯ ಸನ್ನಿವೇಶಗಳನ್ನೂ ವಿಶ್ಲೇಷಿಸಿದಾಗ ಅದರ ಮೂಲಕ ಕತೆಯ ಸಂಪೂರ್ಣ ಹೊಳವುಗಳು ನಮಗೆ ಕಾಣುತ್ತವೆ. ಉದಾಹರಣೆಗೆ ಮಾರ ಹಾಗೂ ನಿರೂಪಕನ ಮೂಲಕ ಬೀಳನ

ಬಗ್ಗೆಯ ವಿವರಣಾತ್ಮಕ ಸಂಭಾಷಣೆಯನ್ನು ನಾವು ಇಲ್ಲಿ ಗಮನಿಸಬೇಕು. ಕಾವ್ಯಮಯ ಹಾಸ್ಯಪ್ರಜ್ಞೆ, ಸಂದರ್ಭದ ಪೂರ್ಣಅರ್ಥವಂತಿಕೆಯನ್ನು ಅರಿಯಬಲ್ಲ ಎಚ್ಚರ ಮತ್ತು ಕಥೆ ಹೇಳುವ ನಿರರ್ಗಳತೆ ಹಾಗೂ ಹೊಚ್ಚ ಹೊಸ ವಿಧಾನ. ಇವೆಲ್ಲ ತೇಜಸ್ವಿ ವೈಶಿಷ್ಟಗಳಾಗಿವೆ. ಅವರ ಮಣ್ಣಿನ ಪಾತ್ರಗಳು ಅತ್ಯಂತ ಜೀವಂತವಾಗುವುದು. ತಮ್ಮ ವರ್ತನೆಗಳಿಂದ ಆದರೂ ಹಾಸ್ಯಬದುಕಿನ ಗಂಭೀರ ಸಮಸ್ಯೆಗಳಿಗೆ ಹೊಸ ಹೊಸ ರೂಪ ಅರ್ಥಗಳನ್ನು ಪಡೆದುಕೊಳ್ಳಲು ನಾಂದಿಯಾಗಿದೆ.

ತೇಜಸ್ವಿಯವರು ಸಣ್ಣವರಿಂದ ದೊಡ್ಡವರವರೆಗೂ ಅವರ ಕಥಾಪಾತ್ರಗಳ ಮೂಲಕ ಹಾಸ್ಯತರಬಲ್ಲರು. ಕಾರಣ ಅವರ ಭಾಷಾಜಾಣ್ಮೆ ಅಂತಹದು. ಅದು ಯಾವುದನ್ನಾದರೂ ವಿಡಂಬನೆಗೆ ಗುರಿ ಮಾಡಬಲ್ಲರು. ಒಂದೊಂದು ಸಲ ನಿರೂಪಕನನ್ನೇ ಹಾಸ್ಯಕ್ಕೆ ಗುರಿಪಡಿಸುವಂತಹ ಸನ್ನಿವೇಶಗಳನ್ನು ನಾವು ಅವರ ಕತೆಗಳಲ್ಲಿ ಕಾಣಬಹುದು. ಉದಾಹರಣೆಗೆ 'ಎಂಗ್ಟನ ಪುಂಗಿ' ತೇಜಸ್ವಿಯವರ ಹಾಸ್ಯ ಸರಳತೆಯಿಂದ ಕೂಡಿದ್ದು, ಸಾಮಾನ್ಯ ಓದುಗನನ್ನು ಆಕರ್ಷಿಸುವಂತಹದ್ದು. ಏಕೆಂದರೆ ಇವರ ಕಥಾವಸ್ತು, ಪಾತ್ರಗಳು ಸಹ ಸಾಮಾನ್ಯ ಜನರ ಬದುಕಿನಿಂದ ಪಡೆದಂತವು. ಆದ್ದರಿಂದ ಪ್ರತಿಯೊಬ್ಬ ಓದುಗನು ಆ ಹಾಸ್ಯ ಸನ್ನಿವೇಶದ ಹಿಂದಿನ ವೈಚಾರಿಕ ನಿಲುವುಗಳನ್ನು ಅರಿಯಬಲ್ಲ ಸಾಮರ್ಥ್ಯ ಪಡೆಯುತ್ತಾನೆ.

ಮಲೆನಾಡಿನ ಪರಿಸರದ ಹಿನ್ನೆಲೆಯಲ್ಲಿ ಕತೆಗಳನ್ನು ಬರೆದ ತೇಜಸ್ವಿ ಅಲ್ಲಿನ ಪರಿಸರಕ್ಕೆ ತಕ್ಕಂತೆ ಪಾತ್ರಗಳನ್ನು ತಮ್ಮ ಕತೆಗಳಲ್ಲಿ ತಂದಿದ್ದಾರೆ. ಇಂತಹ ಪಾತ್ರಗಳ ವಿವರಣೆ ನಮಗೆ ವಿಡಂಬನೆಯಾಗಿ, ಹಾಸ್ಯಮಯವಾಗಿ ಕಂಡುಬಂದರೂ ಅದು ಧ್ವನಿಸುವ ಗಂಭೀರ ಸಮಸ್ಯೆಗಳ ವಿಶ್ಲೇಷಣೆ ನಮಗೆ ಅರಿವಾಗದೆ ಇರದು. ಇಂತಹ ನಿಸರ್ಗದ ಮಡಿಲಲ್ಲಿ ಕತೆಗಳನ್ನು ಬರೆದ ತೇಜಸ್ವಿ ತಮ್ಮ ಕತೆಗಳಲ್ಲಿ ಹಾಸ್ಯವನ್ನು ಪ್ರತಿಬಿಂಬಿಸಿರುವುದು, ಕತೆಗೆ ಸ್ವಾರಸ್ಯವನ್ನು ತಂದುಕೊಡಲು. ಅವರ ಹಾಸ್ಯಮಯ ವಿಡಂಬನೆ ವ್ಯಕ್ತಿಗಳ ಡೊಂಕನ್ನಷ್ಟೇ ಹೇಳದೆ ಅವರ ಸಾಂಸ್ಕೃತಿಕ ನೆಲೆಗಟ್ಟನ್ನು ನಮಗೆ ಪರಿಚಯಿಸುತ್ತದೆ. ಭಾಷೆಯ ಮೇಲ್ಮೈ ಮೂಲಕ ಕಾಣುವ ಈ ಹಾಸ್ಯ ಸನ್ನಿವೇಶಗಳು ಧ್ವನಿಸುವ ಅರ್ಥವಂತಿಕೆ ಅಪೂರ್ವವಾದುದು.

ತೇಜಸ್ವಿಯವರು ಮೂಲತಃ ಹಾಸ್ಯಲೇಖಕರಲ್ಲ. ಆದರೆ ಅವರು ತಮ್ಮ ಜೀವನದಲ್ಲಿ ರೂಢಿಸಿಕೊಂಡ ವೈನೋದಿಕತೆಯನ್ನು ತಮ್ಮ ಕತೆಗಳಲ್ಲಿ ನಿರೂಪಿಸಿದ್ದಾರೆ. ಯಾವುದನ್ನೇ ಆಗಲಿ ಶೋಧನಾತ್ಮಕವಾಗಿ ವಿಚಾರಮಾಡಿ ನೋಡುವ ತೇಜಸ್ವಿಯವರ ಜೀವನಕ್ರಮ ಅವರ 'ಪಾಕಕ್ರಾಂತಿ' ಕತೆಗಳಲ್ಲಿ ನಮಗೆ ಸಿಗುತ್ತದೆ. ಇಲ್ಲಿ ಅವರು ನಿರೂಪಿಸುವ ಕ್ರಮವೇ ಹಾಸ್ಯಮಯ. ಇಂಥಹ ಹಾಸ್ಯ ತಂದಿರುವುದು ಓದುಗರ ಮನರಂಜನೆಗಷ್ಟೇ ಅಲ್ಲದೇ ಕಥಾಸ್ವಾರಸ್ಯಕ್ಕಾಗಿ ವಿಭಿನ್ನ ನಿರೂಪಣೆಗಾಗಿ ಹಾಗೂ ವಿಶ್ಲೇಷಣ ಕ್ರಮದ ಪೂರ್ಣ ಅರ್ಥವಂತಿಕೆಯ ಕ್ರಮಕ್ಕಾಗಿ, ಪ್ರಧಾನವಾಗಿ ಗಂಭೀರ ಹಾಗೂ ವೈಚಾರಿಕ ಲೇಖಕರಾದ ತೇಜಸ್ವಿ ಅವರ ಕಥಾಸಾಹಿತ್ಯವನ್ನು ವಿಡಂಬನಾತ್ಮಕ ಹಾಸ್ಯದ ಹಿನ್ನೆಲೆಯಲ್ಲೂ ಪರಿಭಾವಿಸಬಹುದೆಂಬುದನ್ನು ನನ್ನ ಈ ಸಂಪ್ರಬಂಧದಲ್ಲಿ ಸಾಬೀತು ಪಡಿಸಲು ಪ್ರಯತ್ನಿಸಿದ್ದೇನೆ. ಸಮಗ್ರ

ಕನ್ನಡ ಕಥಾಲೇಖಕರಲ್ಲಿ ತೇಜಸ್ವಿ ಅವರು ವಿಭಿನ್ನ ಲೇಖಕರಾಗಿ ಕಾಣುವುದಕ್ಕೆ ಅವರ ಹಾಸ್ಯ ನಿರೂಪಣೆಯು ಕಾರಣವಾಗಿದೆ ಎಂಬುದು ನನ್ನ ಅಭಿಪ್ರಾಯವಾಗಿದೆ.

# ಸಹಾಯಕ ಸಾಹಿತ್ಯ


೧. ಕೆ.ಪಿ.ಪೂರ್ಣಚಂದ್ರತೇಜಸ್ವಿ — ಹುಲಿಯೂರಿನ ಸರಹದ್ದು
ಪುಸ್ತಕ ಪ್ರಕಾಶನ, ಮೈಸೂರು. ೧೯೬೨

೨. ಕೆ.ಪಿ.ಪೂರ್ಣಚಂದ್ರತೇಜಸ್ವಿ — ಅಬಚೂರಿನ ಪೋಸ್ಟಾಫೀಸು
ಪುಸ್ತಕ ಪ್ರಕಾಶನ, ಮೈಸೂರು. ೧೯೬೩

೩. ಕೆ.ಪಿ.ಪೂರ್ಣಚಂದ್ರತೇಜಸ್ವಿ — ಪರಿಸರದ ಕತೆಗಳು
ಪುಸ್ತಕ ಪ್ರಕಾಶನ, ಮೈಸೂರು. ೧೯೯೦

೪. ಕೆ.ಪಿ.ಪೂರ್ಣಚಂದ್ರತೇಜಸ್ವಿ — ಕಿರಿಗೂರಿನ ಗಯ್ಯಾಳಿಗಳು
ಪುಸ್ತಕ ಪ್ರಕಾಶನ, ಮೈಸೂರು. ೧೯೯೭

೫. ಕೆ.ಪಿ.ಪೂರ್ಣಚಂದ್ರತೇಜಸ್ವಿ — ಪಾಕಕ್ರಾಂತಿ
ಪುಸ್ತಕ ಪ್ರಕಾಶನ, ಮೈಸೂರು. ೨೦೦೮

೬. ಕೆ.ಪಿ.ಪೂರ್ಣಚಂದ್ರತೇಜಸ್ವಿ — ಅಣ್ಣನ ನೆನಪು
ಪುಸ್ತಕ ಪ್ರಕಾಶನ, ಮೈಸೂರು. ೨೦೦೯

೭. ಕೆ.ಪಿ.ಪೂರ್ಣಚಂದ್ರತೇಜಸ್ವಿ — ವಿಮರ್ಶೆಯ ವಿಮರ್ಶೆ
ಪುಸ್ತಕ ಪ್ರಕಾಶನ, ಮೈಸೂರು. ೨೦೦೯

೮. ಡಾ.ಎಂ.ಎಚ್.ಸುಂಕಾಪುರ — ಕನ್ನಡ ಸಾಹಿತ್ಯದಲ್ಲಿ ಹಾಸ್ಯ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,
೧೯೬೫

೯. ಎಚ್.ಕೆ.ನಂಜುಂಡಸ್ವಾಮಿ — ನಗೆಗನ್ನಡಂ ಗೆಲ್ಗೆ
ವೈ.ರಾಜಗೋಪಾಲ್ — ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಾಸ್ಯ, ಕನ್ನಡ
ಸಾಹಿತ್ಯ ರಂಗ, ೨೦೦೭

೧೦. ಎಸ್.ವಿ.ರಂಗಣ್ಣ — ವಿಡಂಬನೆ

೧೨. ಎಸ್.ಕೆ.ರಾಮಚಂದ್ರರಾವ್ — ನಗೆ

೧೩. ಗಿರಡ್ಡಿಗೋವಿಂದರಾಜು — ಸಣ್ಣಕತೆಯ ಹೊಸ ಒಲವುಗಳು

೧೪. ಜಿ.ಪಿ.ರಾಜರತ್ನಂ — ವಿಚಾರ ರಶ್ಮಿ,
ಸಾಹಿತ್ಯ ಮಂಟಪ, ಬೆಂಗಳೂರು.೧೯೯೨

| | |
|---|---|
| ೧೫. ಡಾ.ಎಚ್.ಶಶಿಕಲಾ | ಏಕ–ಅನೇಕ<br>ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು.೨೦೦೫ |
| ೧೬. ಲಂಕೇಶ್ | ಪ್ರಸ್ತುತ<br>ಲಂಕೇಶ್ ಪ್ರಕಾಶನ, ಬೆಂಗಳೂರು.೨೦೦೬ |
| ೧೭. ಪ್ರೊ.ಜಿ.ಟಿ.ವೀರಪ್ಪ | ತೇಜಸ್ವಿ ಸಾಹಿತ್ಯ ಕೃಷಿ<br>ಕನ್ನಡ ಸಾಹಿತ್ಯ ಅಕಾಡೆಮಿ,<br>ಬೆಂಗಳೂರು.೨೦೦೪ |
| ೧೮. ಟಿ.ಪಿ.ಅಶೋಕ | ತೇಜಸ್ವಿ ಕಥನ<br>ಅಕ್ಷರ ಪ್ರಕಾಶನ, ಸಾಗರ. ೨೦೦೪ |
| ೧೯. ಡಿ.ವಿ.ಪ್ರಹ್ಲಾದ್ | ತೇಜಸ್ವಿ ಲೋಕ<br>ಸಂಜಯ ಪ್ರಕಾಶನ, ಬೆಂಗಳೂರು. ೨೦೦೭ |
| ೨೦. ಡಾ.ಎಂ.ಎಚ್.ಮಹೇಶ್ವರಯ್ಯ | ಪೂರ್ಣಚಂದ್ರತೇಜಸ್ವಿ<br>ನವಕರ್ನಾಟಕ ಪ್ರಕಾಶನ,<br>ಬೆಂಗಳೂರು. ೨೦೦೮ |
| ೨೧. ಬೇ.ಗೋ.ರಮೇಶ್ | ಪೂರ್ಣಚಂದ್ರತೇಜಸ್ವಿ<br>ದಿವ್ಯ ಪ್ರಕಾಶನ, ಬೆಂಗಳೂರು. ೨೦೦೭ |
| ೨೨. ಕೆ.ಪಿ.ಭಟ್ | ಅರ್ಥರೇಖೆ<br>ಕನ್ನಡ ಸಂಘ, ಕ್ರೈಸ್ಟ್ ಕಾಲೇಜು,<br>ಬೆಂಗಳೂರು. ೨೦೦೭ |
| ೨೩. ಚಂದ್ರಶೇಖರ ಐಜೂರು<br>ನಟರಾಜ್ ಹುಳಿಯಾರ್ | ಕನ್ನಡ ಟೈಮ್ಸ್ ಬರಹಗಳು<br>ಕನ್ನಡ ಟೈಮ್ಸ್ ಪ್ರಕಾಶನ,<br>ಬೆಂಗಳೂರು. ೨೦೦೮ |